# ಲೋಕಮಾನ್ಯ

ಬಿ. ಈಶ್ವರ ಭಟ್ಟ, ಬಿ.ಎ., ಎಲ್‌ಎಲ್.ಬಿ.

೧೯೫೭

ಕನ್ನಡ ಪ್ರಪಂಚ ಪ್ರಕಾಶನ,
[illegible], ಮಂಗಳೂರು-೨.

## ಸಹಾಯಕ ಗ್ರಂಥಗಳು:

1. The Life of Lokamanya Tilak: *D. V. Athalye.*
2. Landmarks in Lokamanya's Life: *N. C. Kelkar*
3. History of Indian National Congress (Vol. I):
   *Dr. Pattabhi Sitharamayya.*
4. Tilak's Speeches & Writings.
5. Indian Nation Builders.
6. Bankim - Tilak - Dayananda: *Sri Aurobindo.*
7. Hinduism through the Ages: *D. S. Sharma.*

ಬೆಲೆ:
ರೂ. 1·00.

ಮುದ್ರಕರ:
ಉದಯ ಪ್ರಿಂಟರ್ಸ್ ಎಂಡ್
ಪಬ್ಲಿಕೇಶನ್ಸ್ (ಪ್ರೈ.) ಲಿಮಿಟೆಡ್,
ಬೆಂಗಳೂರು-3.

*"Arguments and speeches do not win liberty for a nation; but where there is a will in the nation to be free and a man to embody that will in every action of his life and to devote his days to its realisation in the face of every difficulty and every suffering, and where the will of the nation has once said, 'This man and his life mean what I have in my heart and in my purpose', that is a sure sign-post of the future which no one has any excuse for mistaking.*

*"That indomitable will and that unwavering devotion have been the whole meaning of Mr. Tilak's life; they are one reason of his immense hold on the people. For he does not owe his pre-eminent position to any of the causes which have usually made for political leading in India, wealth and great social position, professional success, recognition by government, a power of fervid oratory or of fluent or taking speech; for he had none of these things to help him. He owes it to himself alone and to the thing his life had meant and because he has meant it with his whole mind and his whole soul. He has kept back nothing for himself or for other aims, but has given all to himself and to his country."*

**—S.i Aurobindo.**

# ಒಂದು ಮಾತು

ಒಂದು ವರ್ಷದ ಹಿಂದೆ ಲೋಕಮಾನ್ಯ ತಿಲಕರ ಶತಾಬ್ಧಿಯ ಕಾಲದಲ್ಲಿ ನಾನು ಬರೆದ ಈ ಪುಸ್ತಕ ಈಗ ಬೆಳಕನ್ನು ಕಾಣುತ್ತಿದೆ. ಇದನ್ನು ಬರೆಯುವಾಗ ನಾನು ಕೆಲವು ಇಂಗ್ಲಿಷ್ ಗ್ರಂಥಗಳ ಸಹಾಯವನ್ನು ಪಡೆದಿರುವೆನು. ಈ ಗ್ರಂಥಕರ್ತರಿಗೆಲ್ಲ ನಾನು ಋಣಿಯು.

ಪುಸ್ತಕದ ಕೊನೆಯ ಮೂವತ್ತು ಪುಟಗಳ ಕರಡನ್ನು ನನಗೆ ಸ್ವತಃ ತಿದ್ದುವುದು ಸಾಧ್ಯವಾಗಲಿಲ್ಲ. ಆದುದರಿಂದ ಈ ಪುಟಗಳಲ್ಲಿ ಕೆಲವು ದೋಷಗಳು ಉಳಿದಿವೆ. ಈ ದೋಷಗಳಿಗಾಗಿ ನಾನು ಓದುಗರ ಕ್ಷಮೆ ಕೇಳುತ್ತೇನೆ. ಕೆಲವು ದೋಷಗಳನ್ನು ಮುಂದಿನ ಪುಟದಲ್ಲಿ ಕೊಟ್ಟಿರುವ ಒಪ್ಪೋಲೆಯಲ್ಲಿ ಸರಿಪಡಿಸಲು ಯತ್ನಿಸಿರುವೆನು. ಓದುಗರು ಇದನ್ನು ಗಮನಿಸಬೇಕಾಗಿ ಪ್ರಾರ್ಥನೆ.

ಪುಸ್ತಕವನ್ನು ಅಂದವಾಗಿ ಮುದ್ರಿಸಿ ಉಪಕರಿಸಿದುದಕ್ಕಾಗಿ ಉದಯ ಮುದ್ರಣಾಲಯದ ವ್ಯವಸ್ಥಾಪಕ ಶ್ರೀ। ಎಸ್. ನಾರಾಯಣ ರಾಯರಿಗೆ ಹಾಗೂ ಕೆಲಸಗಾರ ಬಂಧುಗಳಿಗೆ ಕೃತಜ್ಞತೆಗಳು.

೨೩-೭-೧೯೫೭,
ಪುತ್ತೂರು.

**ಬಿ. ಈಶ್ವರ ಭಟ್ಟ.**

# ಒಪ್ಪೋಲೆ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೫೦ | 14 | ನೌಕರಶಾಹಿಯ | ನೌಕರಶಾಹಿಯು |
| ೫೭ | 2 | ಅವನತೆ | ಅವನತಿ |
| ,, | 10-11 | ಸರ್ವಾಧಿಕಾರ | ಸರ್ವಾಧಿಕಾರಿ |
| ೬೦ | 5 | ಸ್ವಗಂ | ಸ್ವರ್ಗಂ |
| ,, | 19 | ಶ್ರೇಯಸಿದೆ | ಶ್ರೇಯಸ್ಸಿದೆ |
| ೬೨ | 16 | ತನ್ನ | ನನ್ನ |
| ೬೩ | 13 | ಪಾಟ್ನಾ | ಪಾಬ್ನಾ |
| ,, | 24-25 | ಮಧ್ಯಸ್ಥಿತಿಗೆ | ಮಧ್ಯಸ್ಥಿಕೆಗೆ |
| ೬೪ | 1 | ಸಂಸ್ಥೆಯಲ್ಲಿ ಅವರ ವಶವಾಗುವುದೇ | ಸಂಸ್ಥೆಯೆಲ್ಲಿ ಅವರ ವಶವಾಗುವುದೋ |
| ೬೫ | 9 | ತಿಲಕರ | ತಿಲಕರು |
| ,, | 26 | ದೃಷ್ಟಿಯಿಂದಲೊ | ದೃಷ್ಟಿಯಿಂದಲೇ |
| ೬೬ | 8 | ಸರಕಾರ | ಸರಕಾರದ |
| ,, | 13 | ವಿಧೇಯತೆಯುಲ್ಲಿ | ವಿಧೇಯತೆಯೆಲ್ಲ |
| ೬೮ | 20 | ಅಡಕವಾಗಿದೆಯೇ | ಅಡಕವಾಗಿದೆಯೋ |
| ೭೧ | 22-23 | ಆದರೆ ಗಾಂಧಿಜಿ ಮಾತ್ರ ತಿಲಕರು ಚುನಾಯಿತರಾದರೆಂದು ಸಾರಿದರಂತೆ! | ಆದರೆ ತಿಲಕರು ಮಾತ್ರ ಗಾಂಧಿಜಿ ಚುನಾಯಿತರಾದರೆಂದು ಸಾರಿದರಂತೆ! |
| ೭೨ | 24 | ಅಂಬಂದಲೆ | ಅರುಂದಲೆ |
| ೭೪ | 20-21 | ಸಂದರ್ಶಿಸುವರೆಂದ | ಸಂದರ್ಶಿಸುವರೆಂದು |
| ೭೫ | 17 | ಆವರ | ಅದರ |
| ೭೮ | 25 | ಚಾರಿತ್ರ್ಯಕ | ಚಾರಿತ್ರ್ಯ |
| ೭೯ | 7 | ಅವರೊಡನೆ | ಅದರೊಡನೆ |
| ೮೨ | 7 | ಚಯುರನ | ಡಯುರನ |
| ,, | 18 | ಚರ್ಚೆಯು | ಚರ್ಚೆಯ |
| ೮೫ | 26 | ನಾಯಕರಿಗೆ | ನಾಯಕನಿಗೆ |

೧

# ಲೋಕಮಾನ್ಯ

"ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು; ಅದನ್ನು ನಾನು ಪಡೆದೇ ತೀರುವೆ."

ಹೀಗೆಂದು ಸಾರಿದವರು ಲೋಕಮಾನ್ಯ ಬಾಲಗಂಗಾಧರ ತಿಲಕರು.

ಭಾರತದ ರಾಜಕೀಯ ಕ್ಷೇತ್ರದಲ್ಲಿ ಗಾಂಧಿಜಿಯನ್ನು ಬಿಟ್ಟರೆ ಲೋಕಮಾನ್ಯರಷ್ಟು ಪ್ರಭಾವ ಬೀರಿದ ವ್ಯಕ್ತಿ ಇನ್ನೊಂದು ಇಲ್ಲ. ದೇಶದ ಜನತೆಯನ್ನು ಅರೆ ನಿದ್ರೆಯಿಂದ ಎಚ್ಚರಿಸಿ, ಅವರಲ್ಲಿ ರಾಷ್ಟ್ರೀಯತೆಯ ಹೊಸ ಸ್ಫೂರ್ತಿಯನ್ನು ಉದಿಸಿದ ಶ್ರೇಯಸ್ಸು ತಿಲಕರಿಗೆ ಸಲುತ್ತದೆ. ಆದುದರಿಂದಲೇ ಅವರನ್ನು 'ಭಾರತ ರಾಷ್ಟ್ರೀಯತೆಯ ಪಿತ' ಎಂದು ಕರೆಯಲಾಗಿದೆ. ಗಾಂಧಿಜಿ 'ರಾಷ್ಟ್ರಪಿತ'ರಾದರೆ ತಿಲಕರು 'ರಾಷ್ಟ್ರೀಯತೆಯ ಪಿತ.'

ತಿಲಕರ ಕಾಲದ ರಾಜಕೀಯ ಸ್ಥಿತಿ ಈಗಿನಂತೆ ಇರಲಿಲ್ಲ. ದೇಶದ ಜನತೆ ರಾಜಕೀಯ ವಿಚಾರಗಳಲ್ಲಿ ಆಗಿನ್ನೂ ಪ್ರಬುದ್ಧವಾಗಿರಲಿಲ್ಲ. ರಾಜಕೀಯವೆಂಬುದು ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದ ಕೇವಲ ಕೆಲವೊಂದು ವ್ಯಕ್ತಿಗಳ ಸೊತ್ತಾಗಿತ್ತು. ಕಾಂಗ್ರೆಸ್ ಸಂಸ್ಥೆ ಆಗ ತಾನೇ ಸ್ಥಾಪಿತವಾಗಿದ್ದಿತು. ಆದರೆ ಅಂದಿನ ಕಾಂಗ್ರೆಸಿಗೂ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮುಂದಿನ ಕಾಂಗ್ರೆಸಿಗೂ ಅಜಗಜಗಳ ಅಂತರ. ಅಂದಿನ ಕಾಂಗ್ರೆಸು ಜನತೆಯ ಹಕ್ಕುಗಳಿಗಾಗಿ ಹೋರಾಡುವ ಸಂಸ್ಥೆಗಿಂತಲೂ ಸರಕಾರದ, ಸರಕಾರಿ ಅಧಿಕಾರಿಗಳ ಹೊಗಳುಭಟ್ಟತನದ ಕೆಲಸವನ್ನೇ ಮಾಡುತ್ತಿತ್ತು. ಸಂಸ್ಥೆಯ ಮುಖಂಡರಲ್ಲಿ ಹೆಚ್ಚಿನವರು ಬ್ರಿಟಿಷ್ ಪ್ರಭುತ್ವದಡಿಯಲ್ಲಿ ದೊಡ್ಡ ದೊಡ್ಡ ಹುದ್ದೆಗಳನ್ನು ಪಡೆದವರಾಗಿದ್ದರು ಅಂಥವರು ಜನಸಾಮಾನ್ಯರ ಹಕ್ಕುಗಳಿಗಾಗಿ ಹೇಗೆ ಹೋರಾಡಿಯಾರು? ಜನತೆಯ ಪ್ರೇಮಸಂಪಾದನೆಗಿಂತಲೂ ಆಳರಸರ ಕೃಪೆಯನ್ನು ಸಂಪಾದಿಸುವುದೇ ಅವರ ಇಚ್ಛೆಯಾಗಿತ್ತು.

ಕಾಂಗ್ರೆಸ್ ಸ್ಥಾಪನೆಯ ಆಗಿನ ಮುಖಂಡರು ದೇಶದ ರಾಜಕೀಯ ಸುಧಾರಣೆಗಳ ಬಗ್ಗೆ ಆಳರಸರಿಗೆ ಮನವಿ-ಮಾನಪತ್ರಗಳನ್ನರ್ಪಿಸುವುದರಲ್ಲಷ್ಟೇ ತೃಪ್ತರಾಗುತ್ತಿದ್ದರು. ಮನವಿಗೆ ಮನ್ನಣೆಯಿತ್ತು ತಮ್ಮ ಕೇಳಿಕೆಯಲ್ಲಿ ನೂರರಲ್ಲಿ ಒಂದು ಪಾಲಷ್ಟಾದರೂ ಮಾನ್ಯವಾದರೆ ಅದೇ ಅವರಿಗೆ ಒಂದು ದೊಡ್ಡ ಸಂಗತಿಯಾಗಿತ್ತು. ಅದನ್ನೇ ಪ್ರಭುತ್ವದ ವರಪ್ರಸಾದವೆಂಬಂತೆ ಕೈಜೋಡಿಸಿ ಸ್ವೀಕರಿಸುತ್ತಿದ್ದರು; ಅದಕ್ಕಾಗಿ ಕೃತಜ್ಞತೆ, ಅಭಿವಂದನೆಗಳನ್ನು ಸಲ್ಲಿಸುತ್ತಿದ್ದರು. ತಮ್ಮ ಕೇಳಿಕೆ ನಿರಾಕರಿಸಲ್ಪಟ್ಟರೆ ಮಾತಿನ ಸೌಮ್ಯ ಪ್ರತಿಭಟನೆಗಿಂತ ಹೆಚ್ಚೇನೂ ಸಾಗುತ್ತಿರಲಿಲ್ಲ.

ಹಾಗಿತ್ತು ತಿಲಕರ ಕಾಲದ ರಾಜಕೀಯ ಸ್ಥಿತಿ.

ಇಂತಹ ಪರಿಸ್ಥಿತಿಯಲ್ಲಿ ಮಹಾರಾಷ್ಟ್ರದ ಈ ತರುಣ ರಾಜಕೀಯ ರಂಗದಲ್ಲಿ ಪ್ರವೇಶಿಸಿ ದೊಡ್ಡ ಕೋಲಾಹಲವನ್ನೇ ಎಬ್ಬಿಸಿದರು. ರಾಜಕೀಯವು ವಿದ್ಯಾವಂತರ ಸೊತ್ತು ಎಂಬುದನ್ನು ಅವರು ಮೊದಲು ಅಲ್ಲಗಳೆದರು. ಜನತೆಯ ನಡುವೆ ಹೋಗಿ, ಅವರಿಗೆ ಅರ್ಥವಾಗುವ ಭಾಷೆಯಲ್ಲಿ ಪರಿಸ್ಥಿತಿಯನ್ನು ವಿವೇಚಿಸಿ ಹೇಳಿ, ಅವರಲ್ಲಿ ಸುಪ್ತವಾಗಿದ್ದ ರಾಷ್ಟ್ರೀಯತೆಯನ್ನು ಬಡಿದೆಬ್ಬಿಸಿದರು. ಜನಸಾಮಾನ್ಯರಲ್ಲಿ ತಾವೂ ಸಾಮಾನ್ಯರಾಗಿ ಬೆರೆತು ಅವರ ಕಷ್ಟಸುಖಗಳಲ್ಲಿ ಭಾಗಿಗಳಾದರು. ಶಿವಾಜಿ ಉತ್ಸವ, ಗಣೇಶ ಉತ್ಸವ ಮೊದಲಾದ ರಾಷ್ಟ್ರೀಯ ಉತ್ಸವಗಳನ್ನು ಪ್ರಚಾರ ಮಾಡಿ ರಾಜಕೀಯ ಆಂದೋಲನಕ್ಕೆ ಒಂದು ಹೊಸ ರೂಪವನ್ನು ಕೊಟ್ಟರು. ಆ ವರೆಗೆ ಜನತೆಯ ಮಧ್ಯೆ ಬೇರೂರಿರದ ಕಾಂಗ್ರೆಸ್ ಚಳವಳಕ್ಕೆ ಭದ್ರವಾದ ಅಡಿಗಲ್ಲನ್ನು ಹಾಕಿದರು.

ಮನವಿ, ಮಾತಿನ ಪ್ರತಿಭಟನೆಗಳಲ್ಲಿ ತಿಲಕರಿಗೆ ವಿಶ್ವಾಸವಿರಲಿಲ್ಲ. ಇದರಿಂದ ಆಳರಸರ ಮನಸ್ಸನ್ನು ತಿದ್ದುವುದು ಸಾಧ್ಯವಿಲ್ಲ ಎಂದು ಅವರು ಹೇಳುತ್ತಿದ್ದರು. "ಮಾತಿನ ಪ್ರತಿಭಟನೆಗಳಿಂದ ಪ್ರಯೋಜನವಿಲ್ಲ. ಆತ್ಮಾವಲಂಬನೆಯ ಹಿಂಬಲವಿಲ್ಲದ ನಿಷೇಧದಿಂದ ಜನತೆಗೆ ಪ್ರಯೋಜನವಾಗದು. ಪ್ರಾರ್ಥನೆ, ನಿಷೇಧಗಳ ದಿನಗಳು ಹೋದುವು...... ತಾವು ಹಕ್ಕುಗಳನ್ನು ಪಡೆಯಲು ಅರ್ಹರು ಎಂಬುದನ್ನು ಜನ ತೋರಿಸಬೇಕು...... ಅಯರ್ಲೆಂಡ್, ಜಪಾನ್, ರಷ್ಯಾಗಳತ್ತ ನೋಡಿರಿ. ಅವರು ಹಾಕಿಕೊಟ್ಟ ದಾರಿಯಲ್ಲಿ ಮುನ್ನಡೆಯಿರಿ."

ಈ ನೀತಿಯನ್ನು ನೌಕರಶಾಹಿ ಹೇಗೆ ಸಹಿಸೀತು? ಚಳವಳವನ್ನು ಬುಡದಿಂದಲೇ ಕಡಿದೊಡೆಯುವ ಪ್ರಯತ್ನ ನಡೆಯಿತು. ಎಲ್ಲವೂ ವಿಫಲ ವಾದಾಗ ತಿಲಕರ ಮೇಲೆ ರಾಜದ್ರೋಹದ ಆರೋಪವೂ ಬಂತು. ಅದನ್ನೂ ತಿಲಕರು ಎದುರಿಸಿದರು–ಒಂದಲ್ಲ, ಎರಡು ಬಾರಿ.

ರಾಜದ್ರೋಹದ ಆರೋಪದಿಂದ ತಿಲಕರು ಎರಡು ಸಲ ಸೆರೆಮನೆ ಕಂಡರು. ದೇಶಕ್ಕಾಗಿ ಹೋರಾಡಿದ್ದಕ್ಕೆ ಅವರಿಗೆ ದೊರೆತ ಕಾಣಿಕೆ ಇದು!

ತಿಲಕರು ನೌಕರಶಾಹಿಯ ವಿರೋಧವನ್ನು ಮಾತ್ರವಲ್ಲದೆ ಕಾಂಗ್ರೆಸ್ ಸಂಸ್ಥೆಯೊಳಗಿನ ತಮ್ಮ ರಾಜಕೀಯ ವಿರೋಧಿಗಳ ವಿರೋಧವನ್ನೂ ಎದು ರಿಸಬೇಕಾಗುತ್ತಿತ್ತು. ತಿಲಕರ ಧೋರಣೆಯನ್ನು, ಕಾರ್ಯಕ್ರಮಗಳನ್ನು ಅವರು ಹಜ್ಜೆಹಜ್ಜೆಗೂ ವಿರೋಧಿಸುತ್ತಿದ್ದರು. ಕೆಲವೊಮ್ಮೆ ಈ ವಿರೋಧ ದಲ್ಲಿ ತತ್ವದ ಭಿನ್ನತೆಗಿಂತಲೂ ವೈಯಕ್ತಿಕ ದ್ವೇಶವೇ ಒಡೆದು ಕಾಣುತ್ತಿತ್ತು. ಅಧಿಕಾರಿವರ್ಗದ ವಿರೋಧವನ್ನು ಕಟ್ಟಿಕೊಳ್ಳಬಾರದೆಂಬುದೂ ಇನ್ನೊಂದು ಕಾರಣವಿದ್ದಿರಬಹುದು. 1897ರಲ್ಲಿ ತಿಲಕರು ಸೆರೆಮನೆಯಲ್ಲಿದ್ದಾಗ, ಅಮರಾವತಿಯ ಕಾಂಗ್ರೆಸ್ ಅಧಿವೇಶನದಲ್ಲಿ ಅವರ ಬಿಡುಗಡೆಯ ಕುರಿತು ಗೊತ್ತುವಳಿಯೊಂದನ್ನು ಸ್ವೀಕರಿಸುವ ಪ್ರಯತ್ನ ಕೂಡ ಸಫಲವಾಗಲಿಲ್ಲ!

ಆದರೆ ತಿಲಕರು ಮಾತ್ರ ಆಗಲೇ ಮಹಾರಾಷ್ಟ್ರದ ಜನತೆಯ ಅನಭಿ ಷಿಕ್ತ ದೊರೆಯಾಗಿದ್ದರು. ಅವರ ರಾಜಕೀಯ ವಿರೋಧಿಗಳಾದ ಮಂದ ಗಾಮಿ ಮುಖಂಡರು 'ರಾಜಮಾನ್ಯ'ರಾಗಿ ಮೆರೆಯುತ್ತಿದ್ದರೆ, ತಿಲಕರು 'ಲೋಕಮಾನ್ಯ'ರೆಂದು ಕೀರ್ತಿಗಳಿಸಿದ್ದರು.

ಸ್ವರಾಜ್ಯ, ಸ್ವದೇಶಿ, ರಾಷ್ಟ್ರೀಯ ಶಿಕ್ಷಣ ಮತ್ತು ಅಸಹಕಾರ– ಇವು ತಿಲಕರ ನಾಲ್ಕು ಕಾರ್ಯಕ್ರಮಗಳು. "ಸ್ವದೇಶಿ, ಸ್ವದೇಶಿ ಎಂಬುದೇ ನಮ್ಮ ಕೂಗು. ನಮ್ಮ ಆಳರಸರು ಇಚ್ಛಿಸದಿದ್ದರೂ ಇದ ರಿಂದಲೇ ನಾವು ಪ್ರಬಲರಾಗುವೆವು. ಸ್ವದೇಶಿ ಮತ್ತು ರಾಷ್ಟ್ರೀಯ ಶಿಕ್ಷಣ ಇವು ಎರಡು ದಾರಿಗಳು."

ಗಾಂಧಿಜಿ ಅಸಹಕಾರ ಚಳವಳವನ್ನು ಪ್ರಾರಂಭಿಸುವ ಹದಿಮೂರು ವರ್ಷಗಳ ಮೊದಲೇ ತಿಲಕರು ಅಸಹಕಾರದ ಕಾರ್ಯಕ್ರಮವನ್ನು ಹಾಕಿ ದ್ದರು. ತಮ್ಮ ರಾಷ್ಟ್ರೀಯವಾದ ಪಕ್ಷದ ಧೋರಣೆಯನ್ನು ವಿವರಿಸುತ್ತ ಅವರು ಹೀಗೆಂದಿರುವರು:

“...... ವಿದೇಶೀಯ ಆಡಳಿತೆಯಿಂದಾಗಿ ನಿಮ್ಮ ಉದ್ದಿಮೆಗಳು ನಾಶವಾಗುತ್ತಿವೆ; ನಿಮ್ಮ ಸಂಪತ್ತು ದೇಶದಿಂದ ಹೊರಹೋಗುತ್ತಿದೆ; ಮನುಷ್ಯರು ಇರಲು ಅಸಾಧ್ಯವಾದಂತಹ ಕೆಳಗಿನ ಮಟ್ಟಕ್ಕೆ ನೀವು ದೂಡಲ್ಪಡುತ್ತಿದ್ದೀರಿ. ಇಂತಹ ಪರಿಸ್ಥಿತಿಯಲ್ಲಿ, ನಿಮ್ಮನ್ನು ರಕ್ಷಿಸಿಕೊಳ್ಳಲು ಬೇರೇನಾದರೂ ದಾರಿಯಿದೆಯೆ? ದಾರಿ ಮನವಿಗಳನ್ನು ಸಲ್ಲಿಸುವುದಲ್ಲ; ಬಹಿಷ್ಕಾರ. ನಿಮ್ಮ ಶಕ್ತಿಯನ್ನು ಸಂಚಯಿಸಿ, ಬಲವನ್ನು ಸಂಘಟಿಸಿ ಕಾರ್ಯಪ್ರವೃತ್ತರಾಗಿರಿ. ಆಗ ನಿಮ್ಮ ಕೇಳಿಕೆಗಳನ್ನು ಆಳರಸರು ನಿರಾಕರಿಸಲಾರರು. ಮಹಾಭಾರತದಲ್ಲಿ ಕೃಷ್ಣ ಸಂಧಾನದ ಕಥೆಯನ್ನು ಜ್ಞಾಪಿಸಿಕೊಳ್ಳಿ. ಸಂಧಾನ ನಡೆಯುತ್ತಿದ್ದಾಗಲೇ ಕೌರವರೂ ಪಾಂಡವರೂ ತಮ್ಮ ಬಲ ಸಂಗ್ರಹಿಸುತ್ತಿದ್ದರು – ಸಂಧಾನ ವಿಫಲವಾದರೆ ಪರಿಸ್ಥಿತಿಯನ್ನೆದುರಿಸಲೆಂದು. ಇದು ರಾಜಕೀಯ. ನಿಮ್ಮ ಬೇಡಿಕೆಗಳು ನಿರಾಕೃತವಾದರೆ ಈ ರೀತಿ ಹೋರಾಡಲು ನೀವು ಸಿದ್ಧರಿರುವಿರಾ? ಹೋರಾಡಲು ಸಿದ್ಧರಿರುವಿರಾದರೆ, ನಿಮ್ಮ ಕೇಳಿಕೆಗಳು ನಿರಾಕರಿಸಲ್ಪಡುವುದೇ ಇಲ್ಲ ಸಿದ್ಧರಿಲ್ಲವಾದರೆ ಅವು ತಿರಸ್ಕೃತವಾಗುವುದು ಖಂಡಿತ - ಬಹುಶಃ ಎಂದೆಂದಿಗೂ. ನಾವು ಸಶಸ್ತ್ರರಲ್ಲ. ಶಸ್ತ್ರಗಳ ಆವಶ್ಯವೂ ಇಲ್ಲ. ಬಹಿಷ್ಕಾರ ಎಲ್ಲವುಗಳಿಗಿಂತಲೂ ಬಲವಾದ ರಾಜಕೀಯ ಅಸ್ತ್ರ............ ಸ್ವಾಯತ್ತ ಸರಕಾರ ನಮ್ಮ ಗುರಿ. ನಮ್ಮ ದೇಶದ ಆಡಳಿತ ಯಂತ್ರ ನಮ್ಮ ಕೈಯಲ್ಲಿ ಬರಬೇಕು. ಎಂದೆಂದಿಗೂ ಕಾರಕೂನರಾಗಿಯೇ ಉಳಿಯಲು ನಾವು ಇಚ್ಛಿಸುವುದಿಲ್ಲ. ಈಗ ನಾವು ಕಾರಕೂನರಾಗಿದ್ದು ವಿದೇಶೀಯ ಸರಕಾರವೊಂದರ ಕೈಯಲ್ಲಿ ದಬ್ಬಾಳಿಕೆಯ ಸಾಧನವಾಗಿದ್ದೇವೆ. ಈ ವಿದೇಶೀಯ ಸರಕಾರ ತನ್ನ ಸ್ವಂತ ಬಲದಿಂದ ನಮ್ಮನ್ನು ಆಳುತ್ತಿಲ್ಲ; ನಮ್ಮ ಶಕ್ತಿಯ ಬಗ್ಗೆ ನಮ್ಮನ್ನು ಅಜ್ಞಾನದಲ್ಲಿಟ್ಟು ತನ್ನ ಹಿಡಿತವನ್ನು ಉಳಿಸಿಕೊಂಡಿದೆ ನಾವು ನಿರ್ಬಲರು, ಅವರು ಪ್ರಬಲರು ಎಂದು ನಾವು ನಂಬುವಂತೆ ಮಾಡಿ ಇಂಗ್ಲಿಷರು ನಮ್ಮನ್ನು ಮೋಸಗೊಳಿಸಿದ್ದಾರೆ. ಇದು ರಾಜಕೀಯ. ಈ ರೀತಿಯ ಧೋರಣೆಯಿಂದ ಈ ವರೆಗೆ ನಾವು ವಂಚಿತರಾಗಿದ್ದೇವೆ. ನಮ್ಮ ಹೊಸ ಪಕ್ಷವು, ನಿಮ್ಮ ಭವಿಷ್ಯ ನಿಮ್ಮ ಕೈಯಲ್ಲೇ ಇದೆ ಎಂಬುದನ್ನು ತಿಳಿದುಕೊಳ್ಳಿ, ಎಂದು ಹೇಳಲಿಚ್ಛಿಸುತ್ತದೆ. ಸ್ವತಂತ್ರವಾಗಬೇಕೆಂದು ನೀವು ಇಚ್ಛಿಸಿದಲ್ಲಿ ನೀವು ಸ್ವತಂತ್ರರಾಗಬಹುದು; ಆ ಇಚ್ಛೆ ಇಲ್ಲದಲ್ಲಿ ಎಂದೆಂದಿಗೂ

ನೀವು ಪರತಂತ್ರರಾಗಿಯೇ ಉಳಿಯುವಿರಿ. ನಿಮ್ಮಲ್ಲನೇಕರು ಸರಕಾರದ ವಿರುದ್ಧ ಶಸ್ತ್ರ ಹಿಡಿಯಲು ಒಪ್ಪದಿರಬಹುದು. ಬೇಡ; ಆದರೆ ಸ್ವಾರ್ಥ ತ್ಯಾಗದ ಮೂಲಕ ಈ ವಿದೇಶೀಯ ಸರಕಾರದೊಡನೆ ಸಹಕರಿಸದಂತೆ ವರ್ತಿಸುವುದಾದರೂ ನಿಮಗೆ ಸಾಧ್ಯವಿಲ್ಲವೆ? ಇದು ಬಹಿಷ್ಕಾರ. ಬಹಿಷ್ಕಾರವು ರಾಜಕೀಯ ಅಸ್ತ್ರವೆಂದು ಮಾತ್ರ ಇದನ್ನೇ ಹೇಳುತ್ತಿರುವುದು. ಕಂದಾಯ ವಸೂಲು ಮಾಡುವುದರಲ್ಲಿ ಮತ್ತು ಶಾಂತಿ ಕಾಯುವುದರಲ್ಲಿ ನಾವು ಈ ಸರಕಾರದೊಡನೆ ಸಹಕರಿಸಬಾರದು. ನಮ್ಮ ದೇಶದ ಗಡಿಯ ಹೊರಗೆ ಭಾರತೀಯ ರಕ್ತ ಮತ್ತು ಹಣದಿಂದ ಯುದ್ಧ ಮಾಡುವುದಕ್ಕೆ ಸಹಾಯ ಕೊಡಬಾರದು. ನ್ಯಾಯಾಡಳಿತದಲ್ಲಿ ಸರಕಾರದೊಡನೆ ಅಸಹಕಾರ ತೋರಬೇಕು. ನಮ್ಮವೇ ನ್ಯಾಯಾಲಯಗಳನ್ನು ನಾವು ಸ್ಥಾಪಿಸಬೇಕು. ಅಷ್ಟೇ ಅಲ್ಲ; ತಕ್ಕ ಸಮಯ ಬಂದಾಗ ಕಂದಾಯ ಕೊಡುವುದನ್ನೂ ನಿರಾಕರಿಸಬೇಕು. ಸಾಮೂಹಿಕ ಪ್ರಯತ್ನದಿಂದ ಇದನ್ನು ಮಾಡುವುದು ನಿಮ್ಮಿಂದ ಸಾಧ್ಯವಿದೆಯೆ? ಸಾಧ್ಯವಿದ್ದಲ್ಲಿ ನಾಳೆಯಿಂದಲೇ ನೀವು ಸ್ವತಂತ್ರರಾಗುವಿರಿ..... "

ತಿಲಕರು 1920ನೇ ಆಗಸ್ಟ್ 1ರಂದು ನಿಧನ ಹೊಂದಿದರು. ಗಾಂಧಿಜಿ ಅಸಹಕಾರ ಚಳವಳವನ್ನು ಉದ್ಘಾಟಿಸಿದುದೂ ಅದೇ ದಿನ. ತಿಲಕರ ಜೀವಜ್ಯೋತಿ ಅಂದು ಆರಿತು; ಆದರೆ ಅವರು ಉರಿಸಿದ ಅಸಹಕಾರದ ಬತ್ತಿ ಬೆಳಗಿತು.

ಗಾಂಧಿಜಿ ಗೋಪಾಲಕೃಷ್ಣ ಗೋಖಲೆಯವರನ್ನು ತಮ್ಮ ರಾಜಕೀಯ ಗುರುವೆಂದು ಕರೆದಿದ್ದಾರೆ. ಆದರೆ ಗಾಂಧಿಜಿಯವರ ಕಾರ್ಯಕ್ರಮಗಳಿಗೆ ಅಸ್ತಿಭಾರವನ್ನು ಹಾಕಿಕೊಟ್ಟು ಹೋದವರು ಬಾಲಗಂಗಾಧರ ತಿಲಕರು ಎಂಬುದನ್ನು ಅಲ್ಲಗಳೆಯುವುದು ಕಷ್ಟ.

"ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು; ಅದನ್ನು ಪಡೆದೇ ತೀರುವೆ" ಎಂದು ತಿಲಕರು ಹೇಳಿದರು. ಆದರೆ ಅವರ ಜೀವನಕಾಲದಲ್ಲಿ ಸ್ವರಾಜ್ಯ ಬರಲಿಲ್ಲ. ಅವರು ದೇಶವನ್ನಗಲಿದ ಇಪ್ಪತ್ತೇಳು ವರ್ಷಗಳ ಅನಂತರ ನಾವು ಪೂರ್ಣ ಸ್ವರಾಜ್ಯ ಪಡೆದೆವು. ಇಂದೀಗ ಸ್ವತಂತ್ರ ಭಾರತ ತಿಲಕರು ದೇಶಕ್ಕೆ ಸಲ್ಲಿಸಿದ ಸೇವೆಯನ್ನು ಸ್ಮರಿಸುತ್ತದೆ.

—o⊂⊃oo⊂⊃o—

೨

# ನೂರು ವರ್ಷಗಳ ಹಿಂದೆ

ನೂರು ವರ್ಷದ ಹಿಂದೆ– ಭಾರತದಲ್ಲಿ ಬ್ರಿಟಿಷ್ ಪ್ರಭುತ್ವದ ಅಸ್ತಿತ್ವವನ್ನೇ ನಡುಗಿಸಿದ ಒಂದು ವರ್ಷದ ಮೊದಲು. ಬಾಲಗಂಗಾಧರ ತಿಲಕರು ಹುಟ್ಟಿದ ವರ್ಷ ಅದು. ಕ್ರಾಂತಿಯ ಹೊಸ್ತಿಲಲ್ಲಿ ಜನಿಸಿ, ಕ್ರಾಂತಿಯ ಕಾಲದಲ್ಲಿ ಬಳೆದ ತಿಲಕರು ಭಾರತದ ರಾಜಕೀಯ ಕ್ಷೇತ್ರದಲ್ಲಿಯೂ ಕ್ರಾಂತಿಯನ್ನೇ ಎಬ್ಬಿಸಿದರು.

ಮಹಾರಾಷ್ಟ್ರದ ರತ್ನಗಿರಿ ತಿಲಕರ ಹುಟ್ಟೂರು. ಅವರ ತಂದೆ ಗಂಗಾಧರ ಪಂತ ತಿಲಕರು. ಹದಿನೇಳು ವರ್ಷಗಳ ಕಾಲ ಅಲ್ಪ ವೇತನದಲ್ಲಿ ಮರಾಠಿ ಶಾಲೆಯೊಂದರಲ್ಲಿ ಶಿಕ್ಷಕರಾಗಿದ್ದ ಅವರು ಕೊನೆಗೆ ಉಪಶಿಕ್ಷಣಾಧಿಕಾರಿಗಳಾಗಿ ನೇಮಕಗೊಂಡಿದ್ದರು. ಗಂಗಾಧರ ಪಂತರು ಗಣಿತ ಶಾಸ್ತ್ರ, ಸಂಸ್ಕೃತ, ಮರಾಠಿಗಳಲ್ಲಿ ವಿದ್ವಾಂಸರಾಗಿದ್ದರು.

ಬಾಲಗಂಗಾಧರ ತನ್ನ ಹನ್ನೊಂದನೆಯ ವರ್ಷ ಪ್ರಾಯದ ವರೆಗೆ ಯಾವ ಶಾಲೆಗೂ ಹೋಗಲಿಲ್ಲ. ಆ ವರೆಗೆ ಮನೆಯ ಸ್ವತಂತ್ರ ವಾತಾವರಣದಲ್ಲೇ, ಸ್ವತಃ ಶಿಕ್ಷಕರಾಗಿದ್ದ ತಂದೆಯ ಆಶ್ರಯದಲ್ಲಿ ಆತನ ಶಿಕ್ಷಣ ನಡೆಯಿತು. ಮುಂದೆ ಪ್ರಸಿದ್ಧ ವಿದ್ವಾಂಸನೆನಿಸಿದ ಬಾಲನಿಗೆ ಗಂಗಾಧರ ಪಂತರೇ ಸಂಸ್ಕೃತ, ಮರಾಠಿಗಳಲ್ಲಿ ಶಿಕ್ಷಣಕೊಟ್ಟರು. ಬಾಲಗಂಗಾಧರನು ಆಗಲೇ ತನ್ನ ಪ್ರತಿಭಾಶಕ್ತಿಯನ್ನು ತೋರಲು ಪ್ರಾರಂಭಿಸಿದ್ದ. ತಂದೆ ಹೇಳಿಕೊಟ್ಟುದು ಸಾಲದೆ ಆತನ ಮನಸ್ಸು ಅವರ ದೊಡ್ಡ ಪುಸ್ತಕಭಂಡಾರದ ಕಡೆಗೂ ಹೋಗಿತ್ತು.

ಗಂಗಾಧರ ಪಂತರು ಯಾವಾಗಲೂ ಬಾಣನ 'ಕಾದಂಬರಿ' ಯನ್ನು ಓದುವುದನ್ನು ಕೇಳಿ ಒಮ್ಮೆ ಬಾಲನಿಗೂ ಅದನ್ನು ಓದಬೇಕೆಂದಾಯಿತು. ತಾನು ಕಲಿತ ಕೆಲವೊಂದು ಸಂಸ್ಕೃತ ಶ್ಲೋಕಗಳಿಗಿಂತ ಅದೇನೂ ಕಷ್ಟದ್ದಲ್ಲವೆಂದು ಆತ ತಿಳಿದಿದ್ದ. ಒಂದು ದಿನ ತಂದೆಯೊಡನೆ ಪುಸ್ತಕವನ್ನು ಕೇಳಿಯೇ ಬಿಟ್ಟ. ಗಂಗಾಧರ ಪಂತರಿಗೆ ಮಗನ ಕೇಳಿಕೆಯನ್ನು ನೋಡಿ

ಎಲ್ಲಿಲ್ಲದ ಅಚ್ಚರಿ. ಈ ಹುಡುಗ 'ಕಾದಂಬರಿ' ಯನ್ನು ಓದಿ ಅರ್ಥಮಾಡಿ ಕೊಳ್ಳುವುದೆ! ಎಂದು ಅವರು ಯೋಚಿಸಿದರು. ಆದರೆ ಮಗನನ್ನು ನಿರಾಶೆಗೊಳಿಸಲು ಮನಸ್ಸು ಒಪ್ಪದು. "ಪುಸ್ತಕವನ್ನು ಕೊಡುವುದಕ್ಕೆ ಅಡ್ಡಿಯಿಲ್ಲ; ಆದರೆ ನೀನು ಒಂದು ಕೆಲಸಮಾಡಬೇಕು" ಎಂದು ಮಗ ನಿಗೆ ಹೇಳಿದರು. ಸುಲಭವಲ್ಲದ ಒಂದು ಗಣಿತವನ್ನು ಹಾಕಿಕೊಟ್ಟರು. ಬಾಲ ಅದಕ್ಕೆ ಉತ್ತರ ಹುಡುಕಬೇಕು; ಅನಂತರವೇ ಅವನಿಗೆ 'ಕಾದಂಬರಿ'. ಹುಡುಗ ಸ್ಲೇಟು ಮತ್ತು ಕಡ್ಡಿ ಹಿಡಿದು ಕುಳಿತ. ಒಂದು ವರೆ ಗಂಟೆಯ ವರೆಗೆ ಯೋಚಿಸಿದ. ಕೊನೆಗೆ ಉತ್ತರ ಸಿಕ್ಕಿತು. ಅದ ರೊಡನೆ 'ಕಾದಂಬರಿ' ಕೂಡ. ಬಾಲನ ಜೀವನದಲ್ಲಿ ಅದು ಅವನ ಮೊದಲ ವಿಜಯ.

ಮುಂದೆ ಬಾಲಗಂಗಾಧರ ಪೂನಾ ಹೈಸ್ಕೂಲಿಗೆ ಸೇರಿದ. ಹೈಸ್ಕೂಲಿನ ಜಡಜೀವನ ಅವನಿಗೆ ಏನೇನೂ ಹಿಡಿಸುತ್ತಿರಲಿಲ್ಲ. ಅಲ್ಲಿನ ಆ ಶಿಸ್ತು, ಶಿಕ್ಷಣದ ಕ್ರಮ, ಮಾರ್ಕುಗಳಿಗಾಗಿ ನಡೆಯುವ ಮೇಲಾಟ – ಇವಾವುವೂ ಅವನ ಮನಸ್ಸಿಗೆ ಮೆಚ್ಚವು. ಅವನಿಗೆ ಬೇಕಾದುದು ಜ್ಞಾನಸಂಪಾದನೆ ಯೊಂದೇ. ಅದು ಎಲ್ಲಿಂದ ಯಾವ ರೀತಿಯಿಂದ ಬಂದರೂ ಅದಕ್ಕೆ ಅವನ ಸ್ವಾಗತವಿದೆ.

ಶಾಲೆಯಲ್ಲಿ ಉಳಿದವರಿಗೆಲ್ಲ ಒಂದು ದಾರಿಯಾದರೆ ಬಾಲನಿಗೆ ತನ್ನದೇ ದಾರಿ. ಒಮ್ಮೆ ತರಗತಿಯಲ್ಲಿ ಉಪಾಧ್ಯಾಯರು ಉತ್ತರ ಹುಡುಕು ವುದಕ್ಕಾಗಿ ಗಣಿತದ ಕೆಲವು ಸಮಸ್ಯೆಗಳನ್ನು ಹಾಕಿಕೊಟ್ಟಿದ್ದರು. ಬಾಲ ಗಂಗಾಧರ ಎಲ್ಲ ಸಮಸ್ಯೆಗಳಿಗೂ ಉತ್ತರ ಬರೆದ. ಆದರೆ ಉತ್ತರವನ್ನು ಕಂಡುಹಿಡಿದ ಕ್ರಮವನ್ನು ಮಾತ್ರ ತೋರಿಸಲಿಲ್ಲ. ಶಿಕ್ಷಕರು ಬಂದು, "ಕ್ರಮ ಎಲ್ಲಿ?" ಎಂದು ಕೇಳಿದರು. "ಇಲ್ಲಿದೆ" ಎಂದು ಹುಡುಗ ತನ್ನ ತಲೆಯನ್ನು ಮುಟ್ಟಿ ತೋರಿಸಿದ.

ಬಾಲನ ಒರಟುತನ ಅವನ ಶಿಕ್ಷಕರಿಗೆ ಹಿಡಿಸುತ್ತಿರಲಿಲ್ಲ. ಕೆಲ ವೊಮ್ಮೆ ಅವನ ಕುರಿತು ಗಂಗಾಧರ ಪಂತರ ವರೆಗೂ ದೂರು ಹೋಗುತ್ತಿತ್ತು. ಆದರೆ ಬಾಲ ಶಿಕ್ಷಕರ ಹೊಗಳಿಕೆ – ತೆಗಳಿಕೆಗಳ ಕಡೆಗೆ ಗಮನವನ್ನೇ ಕೊಡುತ್ತಿರಲಿಲ್ಲ. ತಂದೆಗೂ ಮಗನ ಮೇಲೆ ಅಭಿಮಾನ. ಆತನಿಗೆ ಭವ್ಯ ಭವಿಷ್ಯತ್ತು ಕಾದಿದೆ ಎಂದು ಅವರು ನಂಬಿದ್ದರು. ಆದರೆ

ಭವಿಷ್ಯತ್ತನ್ನು ನೋಡಲು ಮಾತ್ರ ಅವರು ಉಳಿಯಲಿಲ್ಲ. ಮಗನ ಹೈಸ್ಕೂಲು ಶಿಕ್ಷಣ ಪೂರ್ಣವಾಗುವ ಮೊದಲೇ ಅವರು ನಿಧನಹೊಂದಿದರು. ಬಾಲನ ಪ್ರೀತಿಯ ತಾಯಿ ಅದಕ್ಕೂ ಮೊದಲೇ ಇಹಲೋಕ ತ್ಯಜಿಸಿದ್ದಳು. ತಿಲಕರ ಎಳೆಯ ಜೀವನದ ಮೇಲೆ ಇವೆರಡು ಅಸಾಧ್ಯ ಆಘಾತಗಳು. ಆದರೆ ಅವರ ಕಷ್ಟಸುಖಗಳಲ್ಲಿ ಭಾಗಿಯಾಗಬಲ್ಲ ಜೀವನದ ಸಂಗಾತಿ ತಪಿಬಾಯಿ ಆಗಲೇ ಬಂದಿದ್ದಳು.

ಹೈಸ್ಕೂಲು ಶಿಕ್ಷಣ ಮುಗಿದ ಮೇಲೆ ತಿಲಕರು ಪೂನದ ಡೆಕ್ಕನ್ ಕಾಲೇಜು ಮತ್ತು ಮುಂಬಯಿಯ ಲಾ ಕಾಲೇಜಿನಲ್ಲಿ ಓದಿದರು. ಇಲ್ಲಿಯೂ ಅವರು ಜ್ಞಾನಾರ್ಜನೆಯ ದೃಷ್ಟಿಯಿಂದಲೇ ಓದಿದರಲ್ಲದೆ ತರಗತಿಯಲ್ಲಿ ಪ್ರಥಮ ಶ್ರೇಣಿಯಲ್ಲಿ ಬಂದು ಬಹುಮಾನಗಳಿಸುವ ಉದ್ದೇಶದಿಂದಲ್ಲ. ಯಾವಾಗಲೂ ಅವರು ಪ್ರಸಿದ್ಧ ವಿದ್ವಾಂಸರು ಬರೆದ ಗ್ರಂಥಗಳನ್ನೇ ಅಭ್ಯಾಸಕ್ಕೆ ತೆಗೆದುಕೊಳ್ಳುತ್ತಿದ್ದರು. ಒಂದು ವಿಷಯದ ಮೇಲೆ ಒಂದೇ ಪುಸ್ತಕವನ್ನು ಹಿಡಿದು ಬಾಯಿಪಾಠ ಮಾಡುವುದನ್ನು ಬಿಟ್ಟು ಹಲವಾರು ಗ್ರಂಥಗಳನ್ನು ಓದಿ ವಿಷಯಸಂಗ್ರಹ ಮಾಡುತ್ತಿದ್ದರು. ವಕೀಲಿ ಪರೀಕ್ಷೆಗೆ ಓದುವಾಗ ಹಿಂದೂ ಕಾಯಿದೆಯ ಮೇಲೆ ಇಂಗ್ಲಿಷ್ ವಿದ್ವಾಂಸರ ಗ್ರಂಥಗಳನ್ನು ಹೊಂದಿಕೊಂಡಿರದೆ ಯಾಜ್ಞವಲ್ಕ್ಯ, ವಿಜ್ಞಾನೇಶ್ವರ ಮೊದಲಾದವರ ಮೂಲ ಸಂಸ್ಕೃತ ಗ್ರಂಥಗಳನ್ನೇ ಓದುತ್ತಿದ್ದರು.

ಚಿಕ್ಕಂದಿನಿಂದಲೇ ಬೆಳೆದು ಬಂದ ಅವರ ಜ್ಞಾನದಾಹ ದೊಡ್ಡವರಾದ ಮೇಲೂ ಆರಲಿಲ್ಲ. ತಮ್ಮ ರಾಜಕೀಯ, ಸಾಮಾಜಿಕ ಚಟುವಟಿಕೆಗಳ ಮಧ್ಯದಲ್ಲಿಯೂ ಅವರು ಸ್ವಲ್ಪ ಸಮಯವನ್ನು ಸಂಸ್ಕೃತ ಗ್ರಂಥಗಳ ಮತ್ತು ಗಣಿತಶಾಸ್ತ್ರದ ಅಭ್ಯಾಸಕ್ಕಾಗಿ ವಿನಿಯೋಗಿಸುತ್ತಿದ್ದರು. ಇಷ್ಟೆಲ್ಲ ಪರಿಶ್ರಮಗಳ ಫಲ ಅವರಿಗೆ ವಿದ್ವಾಂಸರೆಂದು ಕೀರ್ತಿಗಳಿಸಿಕೊಟ್ಟ ಮೂರು ಗ್ರಂಥಗಳು: (1) ದಿ ಓರಿಯನ್, (2) ದಿ ಆರ್ಕ್‌ಟಿಕ್ ಹೋಮ್ ಇನ್ ದಿ ವೇದಾಸ್, (3) ಗೀತಾರಹಸ್ಯ. ತಿಲಕರು ಮೊದಲಿನ ಎರಡು ಗ್ರಂಥಗಳನ್ನು ಇಂಗ್ಲಿಷಿನಲ್ಲಿಯೂ ಗೀತಾರಹಸ್ಯವನ್ನು ಮರಾಠಿಯಲ್ಲಿಯೂ ಬರೆದರು. 'ದಿ ಓರಿಯನ್' ಗ್ರಂಥದಲ್ಲಿ ಅವರು ತಮ್ಮ ಸಂಶೋಧನೆಗಳಿಂದ ವೇದಗಳ ಕಾಲ ಕ್ರಿ ಪೂ. 6000ವೆಂದೂ, 'ದಿ ಆರ್ಕ್‌ಟಿಕ್ ಹೋಮ್ ಇನ್ ದಿ ವೇದಾಸ್' ಗ್ರಂಥದಲ್ಲಿ ಆರ್ಯರ ಮೂಲ

ಸ್ಥಾನವು ಮಧ್ಯ ಏಸ್ಯಾ ಆಗಿರದೆ, ಉತ್ತರ ಧ್ರುವ ಆಗಿತ್ತೆಂದೂ ಸಾಧಿಸಿದ್ದಾರೆ. 'ಗೀತಾರಹಸ್ಯ' ಗೀತೆಯ ಮೇಲೆ ಭಾಷ್ಯ. ಅದರಲ್ಲಿ ತಿಲಕರು ಕರ್ಮ ಯೋಗದ ಹೊಸ ತತ್ವವನ್ನು ನಿರೂಪಿಸಿರುವರು.

ಇಷ್ಟೊಂದು ಘನ ವಿದ್ವಾಂಸರೆಂದು ಕೀರ್ತಿಗಳಿಸಿದ ತಿಲಕರು ಎಫ್. ಎ. ಪರೀಕ್ಷೆಯಲ್ಲಿ ಒಮ್ಮೆ ನಪಾಸಾದರೆಂದರೆ ಕೆಲವರಾದರೂ ಅಚ್ಚರಿಪಡ ಬಹುದು. ಅದಕ್ಕೆ ಕಾರಣ ಇದು:

ತಿಲಕರು ಶಾರೀರಿಕವಾಗಿ ಬಹಳ ಕ್ಷೀಣವಾಗಿದ್ದರು. ಕಾಲೇಜಿಗೆ ಹೋದಾಗ ಅವರಿಗೆ ತಮ್ಮ ದೇಹಶಕ್ತಿಯನ್ನು ಬೆಳೆಸಿಕೊಳ್ಳಬೇಕೆಂದು ಕಂಡಿತು. ಯಾವುದಕ್ಕೂ ಹೃಷ್ಟಪುಷ್ಟವಾದ ಶರೀರ ಅಗತ್ಯ ಎಂಬುದನ್ನು ಅವರು ಮನಗಂಡಿದ್ದರು. ಅದಕ್ಕಾಗಿ, ವಿದ್ಯಾಭ್ಯಾಸವನ್ನೂ ಮರೆತು ಒಂದು ವರ್ಷದ ವರೆಗೆ ಅಂಗಸಾಧನೆ ಮಾಡಿದರು. ಬೆಳಗ್ಗೆ, ಸಂಜೆ ಯಾವ ಹೊತ್ತಿನಲ್ಲಿ ನೋಡಿದರೂ ಅಂಗಸಾಧನೆಯಲ್ಲೇ ಮಗ್ನರಾಗಿರು ತ್ತಿದ್ದರು. ಇವೆಲ್ಲವುಗಳ ಪರಿಣಾಮ ವರ್ಷದ ಕೊನೆಯಲ್ಲಿ ಎಫ್. ಎ. ಪರೀಕ್ಷೆಯಲ್ಲಿ ನಪಾಸು. ಆದರೆ ತಿಲಕರು ಇದಕ್ಕಾಗಿ ವಿಷಾದ ಪಡಲಿಲ್ಲ. ಅವರ ಅಂಗಾಂಗಗಳು ಈಗ ಯಾವ ಆಘಾತವನ್ನೂ ಎದುರಿಸಬಲ್ಲ ವೆಂಬಂತೆ ಬೆಳೆದಿದ್ದುವು. ಮುಂದೆ ರಾಜಕೀಯ ಹೋರಾಟದ ಕಾಲ ದಲ್ಲಿಯೂ ಅವರ ಆರೋಗ್ಯವನ್ನು ರಕ್ಷಿಸಿದುದು ಈ ಒಂದು ವರ್ಷದ ಅವಿಶ್ರಾಂತ ಅಂಗಸಾಧನೆ. ತಮ್ಮ ಬೌದ್ಧಿಕ ಶಕ್ತಿಯ ಒಳಗುಟ್ಟನ್ನು ಯಾರಾದರೂ ಕೇಳಿದರೂ ತಿಲಕರು ಆ ಒಂದು ವರ್ಷವನ್ನೇ ಎತ್ತಿಹೇಳು ತ್ತಿದ್ದರು. "ಹದಿನಾರರಿಂದ ಇಪ್ಪತ್ತೈದು ವರ್ಷ ಪ್ರಾಯದ ಒಳಗೆ ಮನಸ್ಸಿನಂತೆ ದೇಹವನ್ನೂ ಬೆಳೆಸಿಕೊಂಡರೆ, ಮತ್ತು ಹಾಗೆ ಬೆಳೆಸಿಕೊಂಡ ದೈಹಿಕ ಶಕ್ತಿಯನ್ನು ದುರಭ್ಯಾಸಗಳಿಂದ ಕೆಡಿಸಿಕೊಳ್ಳದಿದ್ದರೆ, ವೃದ್ಧಾಪ್ಯದ ವರೆಗೂ ಎಷ್ಟೇ ಶ್ರಮಪೂರ್ವಕವಾದ ಬೌದ್ಧಿಕ ಕೆಲಸವನ್ನೂ ತಡೆದುಕೊಳ್ಳ ಬಹುದು" ಎಂದು ಅವರೆನ್ನುತ್ತಿದ್ದರು.

ಕಾಲೇಜಿನಲ್ಲಿದ್ದಾಗ ವಾದದಲ್ಲಿ ತಿಲಕರು ಎಲ್ಲರಿಗಿಂತ ಮುಂದು. ಅವರ ಮಾತಿನ ವೈಖರಿಯ ಮುಂದೆ ಸಾಮಾನ್ಯರಿಗೆ ನಿಲ್ಲುವುದು ಸಾಧ್ಯ ವಿರುತ್ತಿರಲಿಲ್ಲ. ಯಾವುದನ್ನೂ ಸರಳವಾಗಿ, ನಿರ್ದಾಕ್ಷಿಣ್ಯದಿಂದ ಹೇಳಿ ಬಿಡುತ್ತಿದ್ದರು. ಮನಸ್ಸಿನಲ್ಲೊಂದು, ಮಾತಿನಲ್ಲಿ ಇನ್ನೊಂದು ಎಂಬ

ನೀತಿಯನ್ನು ಅವರು ಅರಿಯರು. ಅದುದರಿಂದಲೇ ಅವರಿಗೆ 'ಮಿಸ್ಟರ್ ಬ್ಲಂಟ್' ಎಂಬ ಹೆಸರೂ ದೊರಕಿತ್ತು. 'ಬ್ಲಂಟ್' ಎಂದರೆ ಕಂಡು ದನ್ನು ಕಂಡಂತೆ, ಇದ್ದುದನ್ನು ಇದ್ದಂತೆ ಹೇಳುವವ ಎಂದು ಅರ್ಥ. ಈ 'ಬ್ಲಂಟ್‌ನೆಸ್' ಮುಂದೆಯೂ ಅವರನ್ನು ಬಿಟ್ಟು ಹೋಗಲಿಲ್ಲ ಇದ ರಿಂದಲೇ ಅವರು ಅನೇಕರ ವಿರೋಧವನ್ನು ಕಟ್ಟಿಕೊಂಡರೋ ಏನೋ!

ಬಾಲಗಂಗಾಧರ ತಿಲಕರು ವಿದ್ಯಾರ್ಥಿಯಾಗಿದ್ದಾಗ ನಡೆದ ಮೂರು ಘಟನೆಗಳು ಅವರ ಜೀವನದ ಮುಂದಿನ ಮಾರ್ಗವನ್ನು ರೂಪಿಸಲು ಕಾರಣವಾದುವು.

ಮೊದಲನೆಯ ಘಟನೆ ಬರೋಡದ ಮಹಾರಾಜರಾದ ಮಲ್ಹಾರರಾವ್ ಗಾಯಕ್ವಾಡರ ಪದಚ್ಯುತಿ ಮತ್ತು ವಿಚಾರಣೆ. ರಾಜ್ಯದ ಬ್ರಿಟಿಷ್ ರೆಸಿ ಡೆಂಟನನ್ನು ವಿಷಹಾಕಿ ಕೊಲೆಮಾಡಲು ಯತ್ನಿಸಿದರೆಂಬ ಕಾರಣದಿಂದ ಗಾಯಕ್ವಾಡರನ್ನು ಪದಚ್ಯುತಿಗೊಳಿಸಿ ವಿಚಾರಣೆಗೆ ಗುರಿಮಾಡಲಾಗಿತ್ತು. ಮಹಾರಾಜರು ನಿರ್ದೋಷಿಗಳೆಂದು ಸಾಮಾನ್ಯವಾಗಿ ಎಲ್ಲರ ಭಾವನೆ. ಅವರನ್ನು ವಿಚಾರಿಸಿದ ಸಮಿತಿಯ ಮುಂದೆ ಕೂಡ ಅವರ ಮೇಲಿನ ಆರೋಪಗಳ ರುಜುವಾತು ಆಗಿರಲಿಲ್ಲ. ಆದರೂ ಬ್ರಿಟಿಷ್ ಸರಕಾರ ಗಾಯಕ್ವಾಡರನ್ನು ಪುನಃ ಮಹಾರಾಜರಾಗಿ ಪಟ್ಟಕ್ಕೇರಿಸಲಿಲ್ಲ. ದೇಶೀಯ ಮಹಾರಾಜನೊಬ್ಬನಿಗೆ ಆದ ಈ ರೀತಿಯ ಅಪಮಾನ - ಅನ್ಯಾಯಗಳನ್ನು ಕಂಡು ತಿಲಕರ ತರುಣ ಮರಾಠಿರಕ್ತ ಕುದಿಯಿತು. ಹದಿನೇಳು - ಹದಿ ನೆಂಟನೆಯ ಶತಮಾನಗಳ ವೀರ ಮರಾಠಿಗರ ಇತಿಹಾಸವನ್ನು ನೆನಸಿ, ಅವರ ಇಂದಿನ ಸ್ಥಿತಿಯನ್ನು ನೋಡಿದಾಗ ಅವರ ಮನಮರುಗಿತು. ಈ ಘಟನೆ ನಡೆದುದು 1875ಲ್ಲಿ.

ಅದರ ಮುಂದಿನ ವರ್ಷವೇ ಇನ್ನೊಂದು ಘಟನೆ ನಡೆಯಿತು. ಅದು ಮಹಾರಾಷ್ಟ್ರದ ವಾಸುದೇವ ಬಲವಂತ ಫಡ್ಕೆ ಎಂಬ ಸರಕಾರಿ ಗುಮಾಸ್ತ ನೊಬ್ಬನ ನೇತೃತ್ವದಲ್ಲಿ ಸರಕಾರವನ್ನುರುಳಿಸಲು ನಡೆದ ಒಳಸಂಚು. ಫಡ್ಕೆಯ ರಾಷ್ಟ್ರಪ್ರೇಮ, ಸಾಹಸೀ ಮನೋವೃತ್ತಿ ಮೆಚ್ಚತಕ್ಕಂಥಾದ್ದಾ ದರೂ, ಸರಿಯಾದ ಸಂಘಟನೆಯಿಲ್ಲದೆ, ಸಾಕಷ್ಟು ಬೆಂಬಲವಿಲ್ಲದೆ ನಡೆಸುವ ಈ ರೀತಿಯ ಹೋರಾಟದ ಪರಿಣಾಮ ಏನೆಂದು ತಿಳಿದೇ ಇದೆ. ಈ ಘಟನೆಯನ್ನು ನೋಡಿ ತಿಲಕರು ಒಂದು ನಿರ್ಧಾರಕ್ಕೆ ಬಂದರು: ಬ್ರಿಟಿಷ

ರನ್ನು ಮದ್ದುಗುಂಡುಗಳಿಂದ ಎದುರಿಸುವುದು ಸಾಧ್ಯವಿಲ್ಲ. ನಮ್ಮನ್ನವರು ಇಂದು ಹಿಡಿತದಲ್ಲಿಟ್ಟುಕೊಳ್ಳುವುದು ಅವರ ಮೇಲ್ಮಟ್ಟದ ಶಿಕ್ಷಣದಿಂದ ಮತ್ತು ಅವರಲ್ಲಿರುವ ಸಂಘಟನಾ ಶಕ್ತಿಯಿಂದ. ನಮ್ಮ ಜನರಲ್ಲಿಯೂ ಉಚ್ಚರೀತಿಯ ಶಿಕ್ಷಣದ ಪ್ರಸಾರವಾಗಬೇಕು; ಅವರಂತೆಯೇ ನಮ್ಮ ಜನರನ್ನು ನಾವು ಸಂಘಟಿಸಬೇಕು. ಆಗ ಮಾತ್ರ ಬ್ರಿಟಿಷರನ್ನು ನಾವು ಸರಿಸಮನಾಗಿ ಎದುರಿಸಬಹುದು.

ಸಾವಿರದ ಎಂಟುನೂರ ಎಪ್ಪತ್ತೇಳು – ಎಪ್ಪತ್ತೆಂಟರಲ್ಲಿ ಸಂಭವಿಸಿದ ಭಯಂಕರ ಬರಗಾಲ ತಿಲಕರ ಮೇಲೆ ವಿಶೇಷ ಪರಿಣಾಮವನ್ನು ಮಾಡಿತು. ಈ ಬರಗಾಲದಲ್ಲಿ ಐವತ್ತು ಲಕ್ಷ ಜನರ ಬಲಿದಾನವಾಗಿತ್ತು. ಈ ರೀತಿಯ ದುರಂತಗಳಿಗೆ ಕಾರಣವೇನೆಂದು ತಿಲಕರು ಹಗಲು ರಾತ್ರಿ ಚಿಂತಿಸಿದರು. ಜನಸಾಮಾನ್ಯರ ದುರವಸ್ಥೆಯನ್ನು ನೋಡಿ ಅವರ ಹೃದಯ ಕರಗಿತು. ಈ ಬರಗಾಲವೇ ತಿಲಕರನ್ನು ಬಡವರ ಬಂಧುವಾಗುವಂತೆ ಮಾಡಿತು.

ಇದೇ ಸಂದರ್ಭದಲ್ಲಿ ತಿಲಕರಿಗೆ ಕೆಲವರು ತರುಣ ಸಾಹಸಿಗಳ ಬೆಂಬಲವೂ ಸಿಕ್ಕಿತು. ಅವರಲ್ಲಿ ವಿಷ್ಣುಶಾಸ್ತ್ರಿ ಚಿಪ್ಳೂಣಕರ್ ಒಬ್ಬರು. ಮಹಾರಾಷ್ಟ್ರದ ಪ್ರಸಿದ್ಧ ವಿದ್ವಾಂಸರಾದ ಕೃಷ್ಣಶಾಸ್ತ್ರಿಗಳ ಪುತ್ರರಾದ ಅವರು ಆಗಲೇ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಪ್ರಭಾವ ಬೀರಿದ್ದರು. ಅವರ ಸಾಹಿತ್ಯದ ಶೈಲಿಯನ್ನು ಜನ ಮೆಚ್ಚಿಕೊಂಡಿದ್ದರು. ಅವರು ಪ್ರಕಟಿಸುತ್ತಿದ್ದ 'ನಿಬಂಧಮಾಲಾ' ಪತ್ರಿಕೆ ಮಹಾರಾಷ್ಟ್ರದಲ್ಲೆಲ್ಲ ಜನಪ್ರಿಯವಾಗಿತ್ತು. ಇನ್ನೊಬ್ಬರು ಗೋಪಾಲ ಗಣೇಶ ಆಗರ್ಕರ್. ಆಗರ್ಕರರೊಡನೆ ತಿಲಕರಿಗೆ ಡೆಕ್ಕನ್ ಕಾಲೇಜಿನಲ್ಲೇ ಸ್ನೇಹ ಬೆಳೆದಿತ್ತು. ಈ ತರುಣ ಜೀವನದ ಸುಖ, ಹಣದ ಆಸೆಗಳನ್ನು ತೊರೆದು ದೇಶಸೇವೆಗಾಗಿ ಬದ್ಧರಾಗಿದ್ದರು. ಆಗರ್ಕರರೊಡನೆ ತಿಲಕರಿಗೆ ಹಲವು ವಿಷಯಗಳಲ್ಲಿ ಮತಭೇದವಿದ್ದರೂ ದೇಶಕ್ಕಾಗಿ ದುಡಿಯಲು ಅವರು ಒಂದಾಗಿದ್ದರು. ಈ ತ್ರಿಮೂರ್ತಿಗಳ ಕೂಟಕ್ಕೆ ಮಹದೇವ ಬಲ್ಲಾಳ ನಾಮಜೋಶಿ ಮತ್ತು ವಾಮನ ಶಿವರಾಮ ಆಪ್ಟೆ ಎಂಬ ಇನ್ನಿಬ್ಬರೂ ಸೇರಿಕೊಂಡರು.

ಈ ಐವರು ತರುಣರ ಸಂಘಟನೆಯ ಫಲ 'ಕೇಸರಿ', 'ಮರಾಠಾ', ಪತ್ರಿಕೆಗಳು ಮತ್ತು ಪೂನದ 'ನ್ಯೂ ಇಂಗ್ಲಿಷ್ ಸ್ಕೂಲ್'. 'ಕೇಸರಿ'

ಮತ್ತು 'ಮರಾಠಾ' ಮಹಾರಾಷ್ಟ್ರದ ಜನತೆಯಲ್ಲಿ ಪ್ರಜಾಪ್ರಭುತ್ವದ ಬೀಜವನ್ನು ಬಿತ್ತಿ ಬೆಳೆಯಿಸಿದರೆ 'ನ್ಯೂ ಇಂಗ್ಲಿಷ್ ಸ್ಕೂಲ್' ರಾಷ್ಟ್ರವನ್ನು ಕಟ್ಟಬಲ್ಲ ಮುಂದಿನ ಪೀಳಿಗೆಗೆ ಹೊಸ ಶಿಕ್ಷಣವನ್ನು ಒದಗಿಸಿತು.

೩

## ಹೊಸ ಶಿಕ್ಷಣ — ಹೊಸ ಜನಾಂಗ

"ಉತ್ತಮ ಪೌರತನವು ಸಾಮಾನ್ಯವಾಗಿ ಒಂದು ಜನಾಂಗದ ನಾಗರಿಕ ಗುರಿಯಾಗಿದೆ. ಈ ವಿಷಯದಲ್ಲಿ ಸಹಜವಾಗಿ ಹಳೆಯ ತಲೆಮಾರಿನ ಜನರೇ ಕಿರಿಯ ಪೀಳಿಗೆಯ ಹಿತರಕ್ಷಕರು. 'ಮಗುವು ಮಾನವನಿಗೆ ತಂದೆ' ಎಂದು ಮಹಾಕವಿ ವರ್ಡ್ಸ್‌ವರ್ತ್ ಹೇಳಿದ್ದಾನೆ. ಆದುದರಿಂದ ನಮ್ಮ ಕಿರಿಯ ಪೀಳಿಗೆಯು ಪೂರ್ಣ ಪೌರತನದ ಸ್ಥಾನವನ್ನು ಪಡೆಯ ಬೇಕೆಂದು ನಾವು ಇಚ್ಛಿಸಿದಲ್ಲಿ ಅದಕ್ಕೆ ತಕ್ಕ ಆದರ್ಶದಂತೆ ನಾವು ಅವರಿಗೆ ಶಿಕ್ಷಣವೊದಗಿಸಬೇಕು. ಬೇರೊಂದು ಮಾತಿನಲ್ಲಿ ಹೇಳುವುದಿದ್ದರೆ, ಶಿಕ್ಷಣ ವನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳದ ಒಂದು ಜನಾಂಗ ಸಾಹಿತ್ಯಿಕ, ಸಾಮಾಜಿಕ ಅಥವಾ ರಾಜಕೀಯ ಪ್ರಾಮುಖ್ಯವನ್ನು ಪಡೆಯಲಾರದು." ಲೋಕಮಾನ್ಯ ತಿಲಕರು ಹೇಳಿದ ಮಾತಿದು.

ರಾಷ್ಟ್ರೀಯ ಶಿಕ್ಷಣದ ನಾಲ್ಕು ಉದ್ದೇಶಗಳನ್ನು ತಿಲಕರು ಈ ರೀತಿ ನಿರೂಪಿಸಿರುವರು:

"ಈ ರೀತಿಯ ರಾಷ್ಟ್ರೀಯ ಶಿಕ್ಷಣ ಕೇಂದ್ರಗಳಲ್ಲಿ ಧಾರ್ಮಿಕ ಶಿಕ್ಷಣಕ್ಕೆ ಪ್ರಾಮುಖ್ಯ ಕೊಡಲಾಗುವುದು. ಶೀಲದ ಬೆಳವಣಿಗೆಗೆ ಲೌಕಿಕ ಶಿಕ್ಷಣವೊಂದೇ ಸಾಲದು. ಉನ್ನತ ತತ್ವಗಳನ್ನು ಅಭ್ಯಾಸ ಮಾಡುವುದರಿಂದ ನಾವು ಕೆಟ್ಟ ಕೃತ್ಯಗಳಿಂದ ದೂರವಾಗಿರಬಹುದು; ಆದುದರಿಂದ ಧಾರ್ಮಿಕ ಶಿಕ್ಷಣ ಅವಶ್ಯ. ಧರ್ಮವು ಪರಮಾತ್ಮನ ಆಕಾರ ವನ್ನು ನಮಗೆ ಸಾಕ್ಷಾತ್ಕಾರಗೊಳಿಸುವುದು. ಮನುಷ್ಯನು ತನ್ನ ಕೃತಿಯ ಸದ್ಗುಣದಿಂದ ಪರಮಾತ್ಮನು ಕೂಡ ಆಗಬಲ್ಲನು ಎಂದು ನಮ್ಮ ಧರ್ಮ

ಹೇಳುತ್ತದೆ. ಕೃತಿಯಿಂದ ನಾವು ದೇವರಾಗಬಲ್ಲೆವಾದರೆ, ಕೃತಿಯಿಂದಲೇ ನಾವೇಕೆ ಯುರೋಪಿಯನರಂತೆ ಬುದ್ಧಿವಂತರೂ ಚತುರರೂ ಆಗಬಾರದು? ಧರ್ಮದಿಂದ ಜಗಳ, ದ್ವೇಷ ಹುಟ್ಟುತ್ತವೆಂದು ಕೆಲವರು ಹೇಳುತ್ತಾರೆ. ಆದರೆ, ಧರ್ಮದಲ್ಲಿ ಜಗಳ ಎತ್ತಬೇಕೆಂದು ಅದೆಲ್ಲಿ ಬರೆದಿದೆ? ಎಂದು ನಾನು ಕೇಳುತ್ತೇನೆ. ಲೋಕದಲ್ಲಿ ಧಾರ್ಮಿಕ ಸಹನೆಯನ್ನು ಪ್ರತಿಪಾದಿಸುವ ಅಥವಾ ತನ್ನ ಸ್ವಂತ ಧರ್ಮಕ್ಕೇ ಅಂಟಿಕೊಳ್ಳಬೇಕೆನ್ನುವ ಯಾವುದೇ ಒಂದು ಧರ್ಮವಿದ್ದರೆ ಅದು ಹಿಂದೂ ಧರ್ಮವೊಂದೇ ಆಗಿದೆ ಈ ಶಾಲೆಗಳಲ್ಲಿ ಹಿಂದುಗಳಿಗೆ ಹಿಂದೂ ಧರ್ಮ, ಮುಸ್ಲಿಮರಿಗೆ ಇಸ್ಲಾಂ ಧರ್ಮವನ್ನು ಕಲಿಸಲಾಗುವುದು.

"ನಾವು ಮಾಡುವ ಎರಡನೆಯ ಕೆಲಸ ವಿದೇಶೀಯ ಭಾಷೆಗಳ ಭಾರವನ್ನು ತಗ್ಗಿಸುವುದು. ಭಾರತದಲ್ಲಿ ಹಲವು ವರ್ಷಗಳಿದ್ದರೂ ಯಾವನೇ ಯುರೋಪಿಯನನು ಒಂದೆರಡು ತಾಸು ಕೂಡ ಸರಿಯಾಗಿ ಮರಾಠಿ ಮಾತನಾಡಲಾರ. ಹಾಗಿರುವಲ್ಲಿ, ನಮ್ಮ ಸ್ನಾತಕರು ಇಂಗ್ಲಿಷ್ ಭಾಷೆಯಲ್ಲಿ ಪರಿಣತರಾಗಬೇಕೆಂದು ವಿಧಿಸಲಾಗಿದೆ. ಈಗಿನ ದಿನಗಳಲ್ಲಿ ಇಂಗ್ಲಿಷ್‌ನಲ್ಲಿ ಸರಿಯಾಗಿ ಮಾತನಾಡಬಲ್ಲವ ಮತ್ತು ಬರೆಯಬಲ್ಲವ ವಿದ್ಯಾವಂತನೆಂದು ಹೇಳಲಾಗುತ್ತದೆ. ಆದರೆ ಭಾಷೆಯ ಜ್ಞಾನವೊಂದೇ ನಿಜವಾದ ಶಿಕ್ಷಣವಲ್ಲ. ವಿದೇಶೀಯ ಭಾಷೆಗಳನ್ನು ಕಲಿಯಲೇಬೇಕೆಂಬ ನಿರ್ಬಂಧ ಭಾರತದಲ್ಲಲ್ಲದೆ ಬೇರೆಲ್ಲಿಯೂ ಇಲ್ಲ. ನಾವೀಗ ಶಿಕ್ಷಣಕ್ಕಾಗಿ ಇಪ್ಪತ್ತು-ಇಪ್ಪತ್ತೈದು ವರ್ಷಗಳನ್ನು ವ್ಯಯಿಸುತ್ತೇವೆ. ದೇಶೀಯ ಭಾಷೆಗಳ ಮಾಧ್ಯಮದಲ್ಲಾದರೆ ಅದನ್ನೇ ಏಳು ಅಥವಾ ಎಂಟು ವರ್ಷಗಳಲ್ಲಿ ಸುಲಭವಾಗಿ ಪಡೆಯಬಹುದು. ಇಂಗ್ಲಿಷ್ ಭಾಷೆಯನ್ನು ಕಲಿಯದಿರುವುದೇನೋ ಸಾಧ್ಯವಿಲ್ಲ. ಆದರೆ ಅದನ್ನು ಒತ್ತಾಯದಿಂದ ಏಕೆ ಹೇರಬೇಕು? ಮಹಮ್ಮದೀಯ ಆಳಿಕೆಯ ಕಾಲದಲ್ಲಿ ನಾವು ಪರ್ಷಿಯನ್ ಕಲಿಯಬೇಕಿತ್ತು; ಆದರೆ ಕಲಿಯಲೇಬೇಕೆಂಬ ನಿರ್ಬಂಧ ಇರಲಿಲ್ಲ. ವೃಥಾ ಸಮಯವ್ಯಯವನ್ನು ತಡೆಯುವುದಕ್ಕಾಗಿ ದೇಶೀಯ ಭಾಷೆಗಳಲ್ಲೇ ಶಿಕ್ಷಣ ಕೊಡಬೇಕೆಂದು ನಾವು ನಿರ್ಧರಿಸಿದ್ದೇವೆ.

"ಮೂರನೆಯದಾಗಿ ಔದ್ಯೋಗಿಕ ಶಿಕ್ಷಣ. ಇದು ಬಹಳ ಪ್ರಾಮುಖ್ಯವಾಗಿದೆ. ಕಡ್ಡಿಪೆಟ್ಟಿಗೆಗಳನ್ನು ಹೇಗೆ ತಯಾರಿಸುವುದೆಂದು ಈ ಶತಮಾನ

ಪಿಡೀ ನಮಗೆ ತಿಳಿದಿರಲಿಲ್ಲ. ಸೊಲ್ಲಾಪುರದಲ್ಲಿ ಹುಲ್ಲಿನಿಂದ ಕಡ್ಡಿಪೆಟ್ಟಿಗೆ ತಯಾರಿಸುತ್ತಾರೆ. ಹುಲ್ಲು ನಮ್ಮ ದೇಶದಲ್ಲಿ ಬೇಕಾದಷ್ಟಿದೆ. ಈ ಉದ್ದಿಮೆಯನ್ನು ನಾವು ನಮ್ಮ ಕೈಗೇ ತೆಗೆದುಕೊಂಡರೆ ಕಡ್ಡಿಪೆಟ್ಟಿಗೆಗಳ ಆಮದನ್ನು ಬಹಳವಾಗಿ ಕಡಿಮೆಮಾಡಬಹುದು. ಸಕ್ಕರೆ ಉದ್ದಿಮೆಯ ಬಗ್ಗೆಯೂ ಇದೇ ಮಾತು ಅನ್ವಯಿಸುತ್ತದೆ. ಮೊರೀಶಸ್‌ನ ಸಕ್ಕರೆಯಷ್ಟೇ ಉತ್ತಮವಾದ ಸಕ್ಕರೆಯನ್ನು ನಾವಿಲ್ಲಿ ತಯಾರಿಸಬಹುದು. ಪೂನದ ಸಮೀಪ ಬೆಳೆಯುವ ಕಬ್ಬಿನಿಂದ ಮೊರೀಶಸ್‌ನ ಕಬ್ಬಿನಿಂದ ಪಡೆಯಬಹುದಾದಷ್ಟೇ ಪ್ರಮಾಣದಲ್ಲಿ ಸಕ್ಕರೆ ಪಡೆಯಬಹುದೆಂದು ವೈಜ್ಞಾನಿಕ ಸಂಶೋಧನೆಗಳಿಂದ ತಿಳಿದಿದೆ. ಕೇವಲ ಸಕ್ಕರೆಯ ಆಯಾತಕ್ಕಾಗಿಯೇ ಪ್ರತಿ ವರ್ಷ ಆರು ಕೋಟಿ ರುಪಾಯಿ ನಮ್ಮ ದೇಶದಿಂದ ಹೊರ ಹೋಗುವುದು ಇದೇಕೆ ಹೀಗಾಗಬೇಕು? ನಮ್ಮ ದೇಶದಲ್ಲಿ ಬೇಕಾದಷ್ಟು ಕಬ್ಬು ಇಲ್ಲವೆ? ಅಥವಾ, ಬೇಕಾದಷ್ಟು ಯಂತ್ರೋಪಕರಣಗಳು ಸಿಗುವುದಿಲ್ಲವೆ? ಇದೊಂದೂ ಅಲ್ಲ; ಕಾರಣ ಬೇರೆಯೇ ಇದೆ. ಈ ಉದ್ಯಮದ ಬಗ್ಗೆ ಬೇಕಾದ ಶಿಕ್ಷಣ ನಮಗೆ ಸಿಗುತ್ತಿಲ್ಲ. ಆದರೆ ಜರ್ಮನಿಯಂತಹ ದೇಶವನ್ನು ತೆಗೆದುಕೊಳ್ಳಿ. ಅಲ್ಲಿಯ ಸರಕಾರದ ಔದ್ಯೋಗಿಕ ಖಾತೆ ದೇಶದಲ್ಲಿ ಯಾವ ಉದ್ದಿಮೆ ಅಧೋಗತಿ ಹಿಡಿದಿದೆ ಎಂಬುದನ್ನು ಪರಿಶೀಲಿಸುತ್ತಲೇ ಇರುತ್ತದೆ; ಮತ್ತು, ಅಂತಹ ಉದ್ದಿಮೆಗಳ ಸುಧಾರಣೆಗೆ ಸರಕಾರ ಬೇಕಷ್ಟು ಸಹಾಯ ಕೊಡುತ್ತದೆ. ಬ್ರಿಟಿಷ್ ಸರಕಾರ ಕೂಡ ಇಂಗ್ಲಂಡಿನಲ್ಲಿ ಇದೇ ಧೋರಣೆ ವಹಿಸಿದೆ ಆದರೆ ನಮ್ಮ ಸರಕಾರ ಮಾತ್ರ ಅದನ್ನಿಲ್ಲಿ ಮಾಡುವುದಿಲ್ಲ. ಸರಕಾರ ಹೀಗೆ ತಿಳಿಯದೇ ಮಾಡುತ್ತಿರಬಹುದು; ಅಥವಾ, ತಿಳಿದೂ ಬೇಕೆಂದೇ ಈ ಧೋರಣೆ ತಾಳಿರಬಹುದು. ಆದರೆ ಸರಕಾರ ಮಾಡುವುದಿಲ್ಲ ಎಂಬ ಕಾರಣದಿಂದ ನಾವು ಸುಮ್ಮನೆ ಕುಳ್ಳಿರಬಾರದು. ಈ ಉದ್ದೇಶಕ್ಕಾಗಿ ದೊಡ್ಡದೊಂದು ತಾಂತ್ರಿಕ ಮತ್ತು ವೈಜ್ಞಾನಿಕ ಪರಿಶೋಧನಾಲಯವನ್ನು ಸ್ಥಾಪಿಸಬೇಕೆಂಬ ಆಲೋಚನೆ ನಮಗಿದೆ....

"ನಾಲ್ಕನೆಯದಾಗಿ, ರಾಜಕೀಯ ಶಿಕ್ಷಣ. ಮಹಾರಾಣಿಯವರ ಘೋಷಣೆ ನಮ್ಮ ಹಕ್ಕುಗಳ ಅಡಿಗಲ್ಲು ಎಂಬುದನ್ನು ವಿದ್ಯಾರ್ಥಿ ತಿಳಿಯಬೇಕು. ನಮ್ಮ ತರುಣರನ್ನು ಈ ಎಲ್ಲ ವಿಚಾರಗಳಿಂದ ಮುಚ್ಚಿಡಲು

ಸರಕಾರ ಪ್ರಯತ್ನಿಸುತ್ತಿದೆ. ನಮ್ಮ ಪೂಜ್ಯರಾದ ದಾದಾಭಾಯಿ ನೌರೋಜಿಯವರು ಐವತ್ತು ವರ್ಷಗಳ ಅನವರತ ಪರಿಶ್ರಮದಿಂದ ಯಾವುದನ್ನು ಸಿದ್ಧಾಂತಗೊಳಿಸಿದರೋ, ಅದನ್ನು ನಮ್ಮ ವಿದ್ಯಾರ್ಥಿಗಳು ತಾರುಣ್ಯದಲ್ಲೇ ತಿಳಿಯಬೇಕು. ಪ್ರತಿವರ್ಷ ಯಾವೊಂದು ಪ್ರತಿಫಲವೂ ಇಲ್ಲದೆ ನಮ್ಮ ದೇಶದಿಂದ ಮೂವತ್ತು ಅಥವಾ ನಲುವತ್ತು ಕೋಟಿ ರುಪಾಯಿ ಹೊರ ಹೋಗುತ್ತಿದೆ. ಆದುದರಿಂದಲೇ ನಾವು ಈ ಭಿಕಾರಿಗಳ ಸ್ಥಿತಿಗೆ ಇಳಿದಿದ್ದೇವೆ. ಈ ವಿಚಾರ ನಮ್ಮ ಜನರಿಗೆ ಅವರ ತಾರುಣ್ಯದಲ್ಲೇ ತಿಳಿದರೆ ಅದು ಅವರ ಹೃದಯದಲ್ಲಿ ಅಳಿಯಲಾರದ ಪರಿಣಾಮವನ್ನುಂಟುಮಾಡುವುದು; ಪ್ರಾಯ ಹೋದ ಮೇಲೆ ಅದು ಸಾಧ್ಯವಿಲ್ಲ. ಆದುದರಿಂದ ಶಾಲೆಗಳಲ್ಲಿ ರಾಜಕೀಯ ಶಿಕ್ಷಣ ಕೊಡಬೇಕು......... ಸರಕಾರವೇ ಇದನ್ನು ಮಾಡುತ್ತಿದ್ದಲ್ಲಿ ನಮಗೆ ಸಂತೋಷವಾಗುತ್ತಿತ್ತು. ಸರಕಾರ ಮಾಡದಿದ್ದಲ್ಲಿ ನಾವು ಮಾಡಬೇಕು. ಸರಕಾರ ನಮ್ಮ ಕೆಲಸದಲ್ಲಿ ಅಡ್ಡಿಯಾಗಲಾರದು; ಹಾಗೆಲ್ಲಾದರೂ ಅಡ್ಡಬಂದರೆ ನಾವು ಅದಕ್ಕೆ ಮನಸ್ಸು ಕೊಡಬಾರದು; ಸೂರ್ಯನ ಉದಯವನ್ನು ಯಾರೂ ತಡೆಯಲಾರರು; ಹಾಗೆಯೇ ನಮ್ಮನ್ನು ಕೂಡ...... ಸರಕಾರಕ್ಕೆ ಅಸಮಾಧಾನವಾದರೂ – ಸರಕಾರ ನಮ್ಮ ಕೆಲಸದಲ್ಲಿ ತಡೆಯಾಗಲಾರದೆಂದೇ ಆಶಿಸೋಣ – ನಾವು ನಮ್ಮ ಕರ್ತವ್ಯವನ್ನು ಮಾಡಬೇಕು. ಮದುವೆಯಾಗಬಾರದೆಂದು ಸರಕಾರ ಹೇಳಿದರೆ ನಾವದನ್ನು ಕೇಳುವೆವೆ? ಶಿಕ್ಷಣದ ಬಗ್ಗೆಯೂ ಹಾಗೆಯೆ. ಇಲಿಗಳು ಗೋಡೆಗಳನ್ನು ಕೆರೆಯುವವೆಂದು ಮನುಷ್ಯರು ಮನೆಕಟ್ಟುವುದನ್ನು ನಿಲ್ಲಿಸುವುದಿಲ್ಲ; ಅಂತೆಯೇ, ಸರಕಾರದ ಅಸಮಾಧಾನದ ಭಯದಿಂದ ನಾವು ನಮ್ಮ ಕೆಲಸವನ್ನು ಬಿಡಬಾರದು. ಕಷ್ಟಗಳು ಬಂದರೆ ಅವನ್ನು ನಮ್ಮ ತರುಣರು ಎದುರಿಸಬೇಕು. ಕಷ್ಟಗಳಿಗೆ ಹೆದರುವುದೆಂದರೆ ಪುರುಷತ್ವವನ್ನು ಕಳೆದುಕೊಂಡಂತೆ...... ದಾರಿಯಲ್ಲಿ ಅಡೆತಡೆಗಳನ್ನೆದುರಿಸಲಾರದ ಯಾವುದೇ ಜನಾಂಗ ಪ್ರಗತಿ ಹೊಂದಲಾರದು.

"ಸ್ವಾಯತ್ತ ಸರಕಾರವಿಲ್ಲದಿರುವುದರಿಂದ ಈ ರೀತಿಯ ಶಿಕ್ಷಣ ನಮಗೆ ದೊರಕುತ್ತಿಲ್ಲ. ಆದರೆ ಈ ಎಲ್ಲ ಹಕ್ಕುಗಳು ಬರುವ ವರೆಗೆ ನಾವು ಕಾಯುತ್ತ ಕುಳಿತಿರಬಾರದು. ಈಗಲೇ ಎಚ್ಚೆತ್ತು ಕಾರ್ಯೋನ್ಮುಖರಾಗಬೇಕು."

ಈ ಮಾತುಗಳನ್ನು ತಿಲಕರು ಸುಮಾರು ಐವತ್ತು ವರ್ಷಗಳ ಹಿಂದೆ ಹೇಳಿದರು.

ನ್ಯೂ ಇಂಗ್ಲಿಷ್ ಸ್ಕೂಲ್ 1880ನೇ ಜನವರಿಯಲ್ಲಿ ಪ್ರಾರಂಭವಾಯಿತು. ತಿಲಕ, ಆಪ್ಟೆ, ಆಗರ್ಕರರಂತಹ ವಿದ್ವಾಂಸರ ಆಶ್ರಯದಲ್ಲಿ ಈ ಶಾಲೆ ಕೆಲವೇ ಸಮಯದಲ್ಲಿ ಮಹಾರಾಷ್ಟ್ರದ ಪುನರೋದಯದ ಕೇಂದ್ರವಾದುದರಲ್ಲಿ ಆಶ್ಚರ್ಯವಿಲ್ಲ. ಪ್ರಾರಂಭದ ದಿನ ಹತ್ತೊಂಭತ್ತು ಇದ್ದ ವಿದ್ಯಾರ್ಥಿಗಳ ಸಂಖ್ಯೆ ನಾಲ್ಕೇ ವರ್ಷಗಳಲ್ಲಿ 858ಕ್ಕೆ ಏರಿತು. ಶಾಲೆಯ ಸಂಚಾಲಕರು ನಿಷ್ಕಾಮ ದೃಷ್ಟಿಯಿಂದ ದುಡಿಯುತ್ತಿದ್ದರು. ಕಡಿಮೆ ವೆಚ್ಚದಲ್ಲಿ ಉತ್ತಮ ಶಿಕ್ಷಣವನ್ನೊದಗಿಸುವುದೇ ಅವರ ಗುರಿಯಾಗಿತ್ತು. ಬೇರೆ ರಂಗಗಳಲ್ಲಿ ನಾಲ್ಕು ಪಟ್ಟು ಹೆಚ್ಚು ಸಂಪಾದಿಸುವ ಅರ್ಹತೆ ಅವರಲ್ಲಿದ್ದರೂ ಅವರು ತಿಂಗಳಿಗೆ ಮೂವತ್ತು ರುಪಾಯಿ ವೇತನದಲ್ಲಷ್ಟೇ ತೃಪ್ತರಾಗಿದ್ದರು.

ಶಾಲೆಯ ಅದ್ಭುತ ಪ್ರಗತಿ ಮತ್ತು ತಿಲಕರು ಹಾಗೂ ಅವರ ಸ್ನೇಹಿತರು ಶಿಕ್ಷಣ ಕ್ಷೇತ್ರದಲ್ಲಿ ಮಾಡಿದ ಸುಧಾರಣೆಗಳನ್ನು ನೋಡಿ ಶಿಕ್ಷಣ ಆಯೋಗದ ಅಧ್ಯಕ್ಷರಾದ ಡಾ। ಹಂಟರ್ ಕೂಡ ಸಮಾಧಾನ ವ್ಯಕ್ತಪಡಿಸಿರುವರು "ಈ ಸಂಸ್ಥೆಯೊಡನೆ ತುಲನೆ ಮಾಡಬಹುದಾದ ಇನ್ನೊಂದು ವಿದ್ಯಾಸಂಸ್ಥೆಯನ್ನು ನಾನು ಭಾರತದಲ್ಲೆಲ್ಲಿಯೂ ನೋಡಿಲ್ಲ. ಇದು ದೇಶದ ಸರಕಾರೀ ಹೈಸ್ಕೂಲುಗಳೊಡನೆ ಜಯಪ್ರದವಾಗಿ ಸ್ಪರ್ಧಿಸುವಂತಿದೆ. ಅಷ್ಟೇ ಅಲ್ಲ; ಅನ್ಯದೇಶಗಳ ಶಾಲೆಗಳೊಡನೆಯೂ ಸರಿಸಮನಾಗಿ ನಿಲ್ಲುವಂತಿದೆ" ಎಂದು ಡಾ। ಹಂಟರ್ 1882ರಲ್ಲಿ ಪ್ರಶಂಸಿಸಿರುವರು.

ತಿಲಕರು ನ್ಯೂ ಇಂಗ್ಲಿಷ್ ಸ್ಕೂಲಿನ ಆತ್ಮದಂತಿದ್ದರು. ಅದರ ಬೆಳವಣಿಗಾಗಿ ಅವರು ಹಗಲಿರುಳು ದುಡಿದರು. ಆದರೆ ಅವರು ಅಧಿಕಾರಕ್ಕಾಗಿ ಅಥವಾ ಕೀರ್ತಿಗಾಗಿ ಆಸೆಪಡಲಿಲ್ಲ. "ದುಡಿಯುವುದೆಂದರೆ ನನಗೆ ಪ್ರೀತಿ. ಗೌರವ, ಕೀರ್ತಿಗಳ ಕುರಿತು ನಾನು ಚಿಂತಿಸುವುದಿಲ್ಲ" ಎಂದು ಅವರೆನ್ನುತ್ತಿದ್ದರು.

ಶಾಲೆಯೊಂದನ್ನು ನಡೆಸುವುದರಲ್ಲಷ್ಟೇ ತಿಲಕರು ತೃಪ್ತರಾಗಲಿಲ್ಲ. ಇಂತಹ ಶಿಕ್ಷಣ ಕೇಂದ್ರಗಳನ್ನು ಮಹಾರಾಷ್ಟ್ರದ ಮೂಲೆಮೂಲೆಗಳಲ್ಲಿ ಸ್ಥಾಪಿಸಬೇಕೆಂಬುದು ಅವರ ಆಶಯ. ಅದಕ್ಕೆ ತ್ಯಾಗಬುದ್ಧಿಯಿಂದ

ಶ್ರಮಿಸಬಲ್ಲ ನವಚೈತನ್ಯದ ತರುಣರು ಬೇಕು. ಅಂತಹ ತರುಣರನ್ನು ಸಿದ್ಧಗೊಳಿಸಲು ಒಂದು ಕಾಲೇಜು ಪ್ರಾರಂಭಿಸಬೇಕೆಂದು ತಿಲಕರು ಹಿರಿಯ ಬಯಕೆಯನ್ನಿಟ್ಟುಕೊಂಡಿದ್ದರು. ತಿಲಕರ ಈ ಬಯಕೆ 1884 ರಲ್ಲಿ ಸಿದ್ಧಿಸಿತು. ಆ ವರ್ಷ ನ್ಯೂ ಇಂಗ್ಲಿಷ್ ಸ್ಕೂಲಿನ ಹಿತಚಿಂತಕರೆಲ್ಲ ಸಭೆಸೇರಿ ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯನ್ನು ಸ್ಥಾಪಿಸಿದರು. ಈ ಸೊಸಾಯಿಟಿಯ ಆಶ್ರಯದಲ್ಲಿ ಫರ್ಗ್ಯುಸನ್ ಕಾಲೇಜು ಪ್ರಾರಂಭ ವಾಯಿತು.

ಕಾಲೇಜಿನ ಬೆಳವಣಿಗೆಗಾಗಿಯೂ ತಿಲಕರು ನಿಷ್ಕಾಮಬುದ್ಧಿಯಿಂದ ದುಡಿದರು. ಕಾಲೇಜಿನಲ್ಲಿ ಹೆಚ್ಚಾಗಿ ಅವರು ಗಣಿತಶಾಸ್ತ್ರ ಮತ್ತು ಸಂಸ್ಕೃತ ಕಲಿಸುತ್ತಿದ್ದರು. ಕೆಲವೊಮ್ಮೆ ವಿಜ್ಞಾನ ವಿಷಯವನ್ನು ತೆಗೆದುಕೊಳ್ಳ ಬೇಕಾಗಿಯೂ ಬರುತ್ತಿತ್ತು. ಯಾವ ವಿಷಯವನ್ನೇ ತೆಗೆದುಕೊಳ್ಳಲಿ, ಅವರ ಉಪನ್ಯಾಸಗಳು ವಿದ್ವತ್ಪೂರ್ಣವಾಗಿರುತ್ತಿದ್ದುವು. ಸಾಮಾನ್ಯ ವಿದ್ಯಾರ್ಥಿಗಳಿಗೆ ಅವು ನುಂಗಲಾರದ ಗುಳಿಗೆಗಳಾಗುತ್ತಿದ್ದುವಾದರೂ ಸ್ವಲ್ಪ ಮೇಲ್ಮಟ್ಟದವರು ಅವುಗಳ ರಸಪಾಕವನ್ನುಂಡು ಆನಂದಿಸುತ್ತಿದ್ದರು

ಆದರೆ ಈ ವಿದ್ಯಾಸಂಸ್ಥೆಗಳ ಸಂಬಂಧವನ್ನಿಟ್ಟುಕೊಳ್ಳುವುದು ತಿಲಕ ರಿಗೆ ಹೆಚ್ಚು ಕಾಲ ಸಾಧ್ಯವಾಗಲಿಲ್ಲ. ಅವರು ಮತ್ತು ಅವರ ಸಹೋ ದ್ಯೋಗಿಗಳಲ್ಲಿ ಅನೇಕ ವಿಷಯಗಳಲ್ಲಿ ಮತಭೇದ ತೋರತೊಡಗಿತು. ಹೊಸತಾಗಿ ಸೇರಿದ ಸಹೋದ್ಯೋಗಿಗಳನೇಕರು ತಿಲಕರ ಆದರ್ಶವನ್ನನು ಸರಿಸಲು ಸಿದ್ಧರಿರಲಿಲ್ಲ. ನಿಸ್ವಾರ್ಥ ಸೇವೆಗಿಂತಲೂ ಸ್ವಾರ್ಥವೇ ಅವರಲ್ಲಿ ಹೆಚ್ಚಾಗಿ ಕಾಣತೊಡಗಿತು ಆಗರ್ಕರರಂತಹ ಶ್ರೇಷ್ಠ ತ್ಯಾಗಿಗಳಲ್ಲಿಯೂ ತ್ಯಾಗಬುದ್ಧಿ ಕಡಿಮೆಯಾಗತೊಡಗಿತು. ತಿಲಕರೊಬ್ಬರು ಮಾತ್ರ ತಮ್ಮ ಆದರ್ಶವನ್ನು ಬಲಿಕೊಡಲು ಸಿದ್ಧರಿರಲಿಲ್ಲ. ತಮ್ಮ ಮಾತು ನಡೆಯುವು ದಿಲ್ಲವೆಂದಾದಾಗ ಅವರು ತಮ್ಮ ಸ್ಥಾನಕ್ಕೆ ರಾಜಿನಾಮೆಯಿತ್ತು ಹೊರ ನಡೆದರು. ಹನ್ನೊಂದು ವರ್ಷಗಳ ಕಾಲ ತಾವು ಕಟ್ಟಿ ಬೆಳೆಯಿಸಿದ ವಿದ್ಯಾ ಸಂಸ್ಥೆಗಳನ್ನು ಬಿಟ್ಟುಹೋಗುವುದೆಂದರೆ ಅವರಿಗೆ ಎಲ್ಲಿಲ್ಲದ ದುಃಖವಾಯಿ ತೇನೋ ನಿಜ. ಆದರೆ ದೇಶಕ್ಕೆ ಮಾತ್ರ ಇದರಿಂದ ಲಾಭವಾಯಿತು. ಅವರ ನಿಷ್ಕಾಮ ಸೇವೆಯ ಸದುಪಯೋಗವನ್ನು ಪಡೆಯುವ ಭಾಗ್ಯ ಇಡೀ ದೇಶದ್ದಾಯಿತು.

ನ್ಯೂ ಇಂಗ್ಲಿಷ್ ಸ್ಕೂಲ್ ಮತ್ತು ಡೆಕ್ಕಾನ್ ಕಾಲೇಜುಗಳಂತೆಯೇ ಮಹಾರಾಷ್ಟ್ರದಲ್ಲಿ ನವೋದಯವನ್ನುಂಟುಮಾಡಲು 'ಕೇಸರಿ' ಮತ್ತು 'ಮರಾಠಾ' ಪತ್ರಿಕೆಗಳು ಸಹಾಯಕವಾದುವು. ಪ್ರಾರಂಭದಲ್ಲಿ ಡೆಕ್ಕಾನ್ ಎಜ್ಯುಕೇಶನ್ ಸೊಸಾಯಿಟಿಯಿಂದಲೇ ಈ ಪತ್ರಿಕೆಗಳು ಪ್ರಕಟವಾಗುತ್ತಿದ್ದುವು. ಮುಂದೆ ತಿಲಕರು ಸೊಸಾಯಿಟಿಯನ್ನು ಬಿಟ್ಟು ಹೊರ ಬಂದಾಗ ಅವು ಅವರ ಸ್ವಂತ ಸೊತ್ತಾದುವು.

'ಕೇಸರಿ' ಮರಾಠಿ ಪತ್ರಿಕೆ. 'ಮರಾಠಾ' ಇಂಗ್ಲಿಷ್ ಭಾಷೆಯಲ್ಲಿ ಪ್ರಕಟವಾಗುತ್ತಿತ್ತು. ಪ್ರಾರಂಭದಲ್ಲಿ ಆಗರ್ಕರ್ 'ಕೇಸರಿ'ಯ ಸಂಪಾದಕರಾಗಿದ್ದರು. 'ಮರಾಠಾ'ದ ಸಂಪಾದನ ಕಾರ್ಯವನ್ನು ತಿಲಕರು ನಡೆಸುತ್ತಿದ್ದರು. ಎರಡೂ ಪತ್ರಿಕೆಗಳು ಮಹಾರಾಷ್ಟ್ರದಲ್ಲಿ ರಾಷ್ಟ್ರೀಯತೆಯನ್ನು ಪ್ರಚಾರಮಾಡಿ ಮರಾಠಿ ಜನರಲ್ಲಿ ತಾವೊಂದು ಜನಾಂಗ ಎಂಬುದರ ಅರಿವು ಮಾಡಿಕೊಟ್ಟುವು. 'ಮರಾಠಾ' ಪತ್ರಿಕೆಯ ಮೂಲಕ ತಿಲಕರು ನೌಕರಶಾಹಿಯನ್ನು ಬಲವಾಗಿ ಟೀಕಿಸುತ್ತಿದ್ದರು; ಜನತೆಯ ಆಶೋತ್ತರಗಳನ್ನು ಎತ್ತಿಹಿಡಿಯುತ್ತಿದ್ದರು. ಆದುದರಿಂದ ಈ ಪತ್ರಿಕೆಗಳು ಜನಪ್ರಿಯವಾಗುವುದರೊಂದಿಗೇ ಅಧಿಕಾರಿವರ್ಗದ ವಕ್ರದೃಷ್ಟಿಗೆ ಬಲಿಯಾದುದರಲ್ಲಿ ಆಶ್ಚರ್ಯವೇನೂ ಇಲ್ಲ.

ತಿಲಕ ಮತ್ತು ಆಗರ್ಕರರಿಗೆ ಸೆರೆಮನೆಯ ಪ್ರಥಮ ಅನುಭವವಾದುದೂ ಈ ಪತ್ರಿಕೆಗಳ ಮೂಲಕವೇ. ಅದರ ಸಂದರ್ಭ ಹೀಗೆ:

ಮರಾಠಾ ಸಂಸ್ಥಾನಗಳಲ್ಲೊಂದಾದ ಕೊಲ್ಹಾಪುರದಲ್ಲಿ ರಾಜಮನೆತನದ ಸ್ಥಿತಿಗತಿಗಳು ಚೆನ್ನಾಗಿರಲಿಲ್ಲ. ರಾಜಾರಾಮ ಮಹಾರಾಜರು ತೀರಿಕೊಂಡಿದ್ದರು. ಅದರ ಮರುವರ್ಷವೇ ಅವರ ವಿಧವೆಯರಿಬ್ಬರು ರಾಜಕುಮಾರ ಶಿವಾಜಿರಾವ್ ಎಂಬವನನ್ನು ದತ್ತಕ್ಕೆ ತೆಗೆದುಕೊಂಡರು. ಈ ರಾಜಕುಮಾರ 1877ರಿಂದಲೇ ಉನ್ಮಾದಕ್ಕೆ ಒಳಗಾಗಿದ್ದ. ಇದಕ್ಕೆ ಅಮಲು ಪದಾರ್ಥಗಳನ್ನು ರಾಜಕುಮಾರನಿಗೆ ಒತ್ತಾಯದಿಂದ ಕೊಡುತ್ತಿದ್ದುದೇ ಕಾರಣವೆಂಬ ವದಂತಿ ಜನರಲ್ಲಿ ಹಬ್ಬಿತ್ತು. ಈ ಕೃತ್ಯದ ಹಿಂದೆ ರಾಜ್ಯದ ದಿವಾನ ರಾವ್‌ಬಹದೂರ್ ಬರ್ವೆ ಮತ್ತು ಡವಾಜರ್ ಮಹಾರಾಣಿಯ ಕೈಯಿತ್ತೆಂದೂ, ರಾಜಕುಮಾರನನ್ನು ಉನ್ಮಾದದ ಅಥವಾ ಮರಣದ ಕಾರಣದಿಂದ ಪಟ್ಟದಿಂದ ತಳ್ಳಿ ಬೇರೊಬ್ಬನನ್ನು ದತ್ತಕ್ಕೆ ತೆಗೆದು

ಕೊಂಡು ಪಟ್ಟಕ್ಕೇರಿಸಬೇಕೆಂಬ ಉದ್ದೇಶ ಅವರಲ್ಲಿತ್ತೆಂದೂ ಸುದ್ದಿ ಹಬ್ಬಿತ್ತು. ಈ ಸುದ್ದಿ ಮಹಾರಾಷ್ಟ್ರದಲ್ಲೆಲ್ಲ ಕಳವಳವನ್ನುಂಟುಮಾಡಿತು. ಅಲ್ಲಲ್ಲಿ ಸಭೆಗಳಾಗಿ ಪ್ರತಿಭಟನೆಗಳು ಹೋದುವು. ಪೂನದಲ್ಲಿ ನಡೆದ ದೊಡ್ಡದೊಂದು ಸಭೆಯಲ್ಲಿ, ರಾಜಕುಮಾರನನ್ನು ಪ್ರಾಮಾಣಿಕರಾದ ಬೇರಾರಾದರೂ ರಕ್ಷಕರ ಅಧೀನಕ್ಕೆ ಒಪ್ಪಿಸಬೇಕೆಂಬ ಗೊತ್ತುವಳಿಯಾಯಿತು. ಇಷ್ಟರಲ್ಲಿ ರಾಜಕುಮಾರನ ಕೊಲೆಮಾಡುವ ಪ್ರಯತ್ನ ನಡೆದಿದೆಯೆಂದೂ ಸುದ್ದಿ ಬರತೊಡಗಿತು. ಇದರ ಅನಂತರ ಕೆಲವು ದಿನಗಳಲ್ಲಿಯೇ ಕೊಲ್ಲಾಪುರದ ದಿವಾನರಿಂದ ಬರೆಯಲ್ಪಟ್ಟವುಗಳೆಂದು ಹೇಳುವ ಮೂರು ಪತ್ರಗಳು ತಿಲಕ ಮತ್ತು ಆಗರ್ಕರರ ಕೈಸೇರಿದುವು. ಈ ಪತ್ರಗಳಲ್ಲಿ ರಾಜಕುಮಾರನನ್ನು ವಿಷಹಾಕಿ ಕೊಲೆಮಾಡುವ ಯೋಜನೆ ಸೂಚಿತವಾಗಿತ್ತು. ತಿಲಕ ಮತ್ತು ಆಗರ್ಕರ್ ಪತ್ರಗಳು ನಿಜವಾದವುಗಳೆಂದೇ ನಂಬಿ ಅವನ್ನು 'ಕೇಸರಿ' ಮತ್ತು 'ಮರಾಠಾ'ದಲ್ಲಿ ಪ್ರಕಟಿಸಿದರು. ಅಷ್ಟೇ ಅಲ್ಲ, ತನ್ಮ ನಿರಪರಾಧಿತ್ವವನ್ನು ನ್ಯಾಯಾಲಯದ ಮುಂದೆ ರುಜುಪಡಿಸಬೇಕೆಂದು ರಾವ್ ಬಹದ್ದೂರ್ ಬರ್ವೆ ಅವರಿಗೆ ಆಹ್ವಾನವನ್ನೂ ಕೊಟ್ಟರು.

ದಿವಾನರಿಗೆ ಆಹ್ವಾನವನ್ನು ಎದುರಿಸದೆ ಈಗ ನಿರ್ವಾಹವಿಲ್ಲ. ಮುಂಬಯಿ ಹೈಕೋರ್ಟಿನ ಮುಂದೆ ಅವರು ತಿಲಕ ಮತ್ತು ಆಗರ್ಕರ್ ಹಾಗೂ ಕೊಲ್ಲಾಪುರದ ತಮ್ಮ ಕೆಲವರು ವಿರೋಧಿಗಳ ವಿರುದ್ಧ ಖಟ್ಲೆ ಹೂಡಿದರು. ಪತ್ರಗಳು ನಿಜವಾದವುಗಳಾಗಿರದೆ ತಮ್ಮ ವಿರೋಧಿಯಾದ ನಾನಾ ಭಿಡೆ ಎಂಬವನಿಂದ ಸೃಷ್ಟಿಸಲ್ಪಟ್ಟವುಗಳೆಂದು ಅವರ ಹೇಳಿಕೆಯಾಗಿತ್ತು. ವಕೀಲ ಸನದನ್ನು ಕೊಡಲು ನಿರಾಕರಿಸಿದ ಹಟದ ಸೇಡು ತೀರಿಸಿಕೊಳ್ಳಲು ನಾನಾ ಭಿಡೆ ಹೀಗೆಲ್ಲ ಮಾಡಿದನೆಂದೂ 'ಕೇಸರಿ', 'ಮರಾಠಾ'ಗಳ ಅನುಭವವಿಲ್ಲದ ಸಂಪಾದಕರು ಆತನ ಒಳಸಂಚಿಗೆ ಬಲಿಯಾದರೆಂದೂ ದಿವಾನರು ಪ್ರತಿಪಾದಿಸಿದರು.

ಮಹಾರಾಷ್ಟ್ರದ ಜನತೆಯ ಪೂರ್ಣ ಸಹಾನುಭೂತಿ ತಿಲಕ ಮತ್ತು ಆಗರ್ಕರರ ಕಡೆಗಿತ್ತು. ಪತ್ರವನ್ನು ಪ್ರಕಟಿಸಿದುದರಲ್ಲಿ ಅವರದೇನೂ ಸ್ವಾರ್ಥವಿರಲಿಲ್ಲ; ಅಥವಾ ಒಳಸಂಚು ನಡೆದಿದ್ದರೂ ಅವರ ಕೈ ಅದರಲ್ಲಿರಲಿಲ್ಲ. ಕೇವಲ ರಾಷ್ಟ್ರಪ್ರೇಮದಿಂದ ಅವರು ಪತ್ರವನ್ನು ಪ್ರಕಟಿಸಿ, ರಾಜಕುಮಾರನ ಮೇಲಾಗುತ್ತಿದ್ದ ಅನ್ಯಾಯವನ್ನು ಬಯಲಿಗೆಳೆಯಲು ಮುಂದೆ ಬಂದಿದ್ದರು.

ಹೈಕೋರ್ಟಿನಲ್ಲಿ ಮುಂಬಯಿಯ ಮುಖಂಡರಾದ ಫಿರೋಜಶಾ ಮೆಹತಾ ಮತ್ತು ತೆಲಂಗ್ ಸಂಪಾದಕರ ಪರವಾಗಿ ವಾದಿಸಿದರು. ಆ ಮೂರು ಪತ್ರಗಳು ನಿಜವಾದವುಗಳೆ? ಎಂಬುದೇ ಖಟ್ಲೆಯಲ್ಲಿ ಮುಖ್ಯ ಪ್ರಶ್ನೆಯಾಗಿತ್ತು. ನಾನಾ ಭಿಡೆ ಕೊನೆಯ ವರೆಗೂ ಹೌದೆಂದೇ ವಾದಿಸಿದ ಆದರೆ ಇದರ ಮೇಲೆ ಬೆಳಕು ಬೀರುವವರು ಯಾರು? ಕೊಲ್ಹಾಪುರದಿಂದ ಕೆಲವರು ಸಾಕ್ಷಿದಾರರು ಬರುವ ನಿರೀಕ್ಷೆಯಿತ್ತು. ಅವರಿಗೆ ನೋಟೀಸು ಹೋದರೂ ಅವರು ಕೋರ್ಟಿನ ಮುಂದೆ ಬರಲಿಲ್ಲ ಬೇರೊಂದು ರಾಜ್ಯದ ನಾಗರಿಕರನ್ನು ಕೋರ್ಟಿನ ಮುಂದೆ ಬರಬೇಕೆಂದು ಒತ್ತಾಯಿಸುವ ಅಧಿಕಾರ ಇನ್ನೊಂದು ರಾಜ್ಯದ ನ್ಯಾಯಾಲಯಕ್ಕೆ ಇಲ್ಲ. ಖಟ್ಲೆಯು ಖಾಸಗಿಯಾದುದರಿಂದ ಸರಕಾರ ಇದರಲ್ಲಿ ಕೈಹಾಕುವಂತಿಲ್ಲ. ನ್ಯಾಯಾಲಯದ ತೀರ್ಪು ನಾನಾ ಭಿಡೆಯ ವಿರುದ್ಧವಾಯಿತು. ತಿಲಕ ಮತ್ತು ಆಗರ್ಕರ್ ಕ್ಷಮೆ ಕೇಳಿದರು. ಇದಕ್ಕೆ ಬರ್ವೆ ಒಪ್ಪಬೇಕಲ್ಲ? ಅವರಿಗೆ ಶಿಕ್ಷೆಯಾಗಲೇಬೇಕೆಂದು ದಿವಾನರು ಹಟಹಿಡಿದರು. ಸಂಪಾದಕರು ದುರುದ್ದೇಶರಹಿತರೆಂದು ನ್ಯಾಯಾಲಯ ಸ್ಪಷ್ಟವಾಗಿ ಹೇಳಿದರೂ 'ಅವಮಾನಕಾರಕ ವಿಷಯವನ್ನು ಅವಿವೇಕದಿಂದ ಪ್ರಕಟಿಸಿದ್ದಕ್ಕಾಗಿ' ಪ್ರತಿಯೊಬ್ಬರಿಗೆ ನಾಲ್ಕು ನಾಲ್ಕು ತಿಂಗಳ ಸಾದಾ ಸಜೆಯನ್ನು ವಿಧಿಸಿತು.

ಸಾವಿರದ ಎಂಟುನೂರ ಎಂಭತ್ತ ಎರಡನೆಯ ಒಕ್ಟೋಬರ 26ರಂದು ಆಗರ್ಕರ್ ಮತ್ತು ತಿಲಕರು ಸೆರೆಮನೆಯಿಂದ ಹೊರಬಂದರು. ಹೊರಗೆ ಅವರಿಗೆ ಅಪೂರ್ವ ಸ್ವಾಗತ ಕಾದಿತ್ತು. ಜನತೆ ಉತ್ಸಾಹದಿಂದ ಅವರನ್ನು ಹೊತ್ತು ಮೆರವಣಿಗೆ ಮಾಡಿತು. ಮಾನಪತ್ರಗಳಾದುವು; ಪ್ರಶಂಸೆಯ ಭಾಷಣಗಳಾದುವು ಇವೆಲ್ಲಕ್ಕೂ ಸೆರೆಮನೆಯಿಂದ ಹಿಂದಿರುಗಿದ ವೀರರು ಕೊಡುವ ಉತ್ತರ ಒಂದೇ – ಕರ್ತವ್ಯವನ್ನು ನೆರವೇರಿಸುವುದರಲ್ಲಿ ಸೆರೆಮನೆಯೊಂದೂ ನಮಗೆ ಅಡ್ಡಬರಲಾರದು. ಇದರ ಅನಂತರ ಆಗರ್ಕರ್ ರಾಜಕೀಯವನ್ನೇ ತೊರೆದು ಶಿಕ್ಷಣ ಮತ್ತು ಸಮಾಜಸುಧಾರಣೆಯ ರಂಗಗಳಲ್ಲಷ್ಟೇ ಉಳಿದರು. ಆದರೆ ತಿಲಕರಿಗೆ ಮಾತ್ರ ಸೆರೆಮನೆಯ ಬಾಗಿಲು ತೆರೆದೇ ಇತ್ತು.

೧

———o⊂⊃o o o⊂⊃o———

೬

# ಸುಧಾರಣೆಯ ಕಳದಲ್ಲಿ

ಬ್ರಿಟಿಷರ ಆಕ್ರಮಣದಿಂದ ನಮ್ಮ ದೇಶದ ರಾಜಕೀಯದ ಮೇಲಷ್ಟೇ ಅಲ್ಲದೆ ಧರ್ಮ, ಸಂಸ್ಕೃತಿ, ಸಾಮಾಜಿಕ ಪದ್ಧತಿಗಳ ಮೇಲೂ ಮಹತ್ವದ ಪರಿಣಾಮಗಳಾದುವು. ಹತ್ತೊಂಭತ್ತನೆಯ ಶತಮಾನದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸ ಪದ್ಧತಿ ಇಲ್ಲಿ ಪ್ರಚಾರದಲ್ಲಿ ಬರಲು ಪ್ರಾರಂಭವಾಯಿತು. ಇದರಿಂದ ಸ್ಫೂರ್ತಿ ಪಡೆದ ಉತ್ಸಾಹಿಗಳನೇಕರು ಪಾಶ್ಚಿಮಾತ್ಯರ ರೀತಿ–ನೀತಿ, ನಡೆ–ನುಡಿ, ಸಾಮಾಜಿಕ ಪದ್ಧತಿಗಳಿಗೆ ಮಾರುಹೋದರು. ಅವರಿಗೆ ಭಾರತೀಯರು ಪಾಶ್ಚಿಮಾತ್ಯರಿಗಿಂತ ಶತಮಾನಗಳಷ್ಟು ಹಿಂದುಳಿದಿರುವಂತೆ ಕಂಡಿತು. ಇಂಗ್ಲಿಷರಿಗೆ ಸರಿಸಮಾನರಾಗಿ ನಿಂತು ಅವರಿಂದ ರಾಜಕೀಯ ಅಧಿಕಾರಗಳನ್ನು ಪಡೆಯಬೇಕಾದರೆ ನಾವೂ ಅವರಂತೆಯೇ ಸಾಮಾಜಿಕವಾಗಿ ಮುಂದುವರಿಯಬೇಕೆಂದು ಇವರು ಭಾವಿಸಿದರು. ಅಂತೆಯೇ, ದೇಶದ ಹಲವು ಭಾಗಗಳಲ್ಲಿ ಸ್ತ್ರೀ ವಿದ್ಯಾಭ್ಯಾಸ, ವಿಧವಾ ಪುನರ್ವಿವಾಹ, ಜಾತಿಭೇದ ನಿರೋಧ ಮೊದಲಾದ ಸುಧಾರಣಾ ಚಳವಳಗಳು ಪ್ರಾರಂಭವಾದುವು. ಮಹಾರಾಷ್ಟ್ರದಲ್ಲಿ ರಾನಡೆ, ಆಗರ್ಕರ್, ಗೋಖಲೆ ಈ ಚಳವಳದ ಅಗ್ರನಾಯಕರಾಗಿದ್ದರು

ಶತಮಾನಗಳಿಂದ ಅನುಸರಿಸಿಕೊಂಡು ಬಂದ ಪದ್ಧತಿಗಳನ್ನು, ಭಾವನೆಗಳನ್ನು ಒಮ್ಮೆಲೇ ಇಲ್ಲವಾಗಿಸುವುದೆಂದರೆ ಅಂತಹ ಸುಧಾರಣೆಗಳಿಗೆ ಸನಾತನಿಗಳಿಂದ ವಿರೋಧ ಬರುವುದು ಸಹಜ. ಆದರೆ ಮಹಾರಾಷ್ಟ್ರದಲ್ಲಿ ಸುಧಾರಣಾ ಚಳವಳಕ್ಕೆ ಬಲವಾದ ವಿರೋಧ ಬಂದುದು ಇಂಗ್ಲಿಷ್ ಶಿಕ್ಷಣದಲ್ಲೇ ಮುಳುಗಿ ಎದ್ದ ಬಾಲಗಂಗಾಧರ ತಿಲಕರಿಂದ ಎಂದರೆ ಯಾರಾದರೂ ಅಚ್ಚರಿಪಡಬಹುದು. ಎಂದರೆ, ತಿಲಕರು ಸುಧಾರಣೆಯ ವಿರೋಧಿಗಳೆ? ಸಮಾಜ ಪ್ರಗತಿಗೊಳ್ಳದೆ ಇದ್ದಂತೆ ಇರಬೇಕೆಂಬ ಅಭಿಪ್ರಾಯದವರೆ? ಅವರು ಸುಧಾರಣೆಗೆ ವಿರೋಧಿಗಳು ಎಂದು ಟೀಕಿಸಿದವರಿದ್ದಾರೆ. ಅಲ್ಲವೆಂದು ಅವರ ಪರವಾಗಿ ವಾದಿಸಿದವರೂ ಇದ್ದಾರೆ

"ತಿಲಕರು ಸಮಾಜ ಸುಧಾರಕರಾಗಿದ್ದರೆ?" ಎಂಬ ಪ್ರಶ್ನೆಗೆ ಅವರ ಜೀವನ ಚರಿತ್ರೆಯನ್ನು ಬರೆದ ಡಿ. ವಿ. ಆತಲ್ಯೆಯವರು ಈ ರೀತಿ ಉತ್ತರಿಸುತ್ತಾರೆ:

"ಯಾವ ಸುಧಾರಣೆಗಳನ್ನು ಅವರು ಬೆಂಬಲಿಸುತ್ತಿದ್ದರು, ಯಾವ ಸುಧಾರಣೆಗಳನ್ನು ಅವರು ಖಂಡಿಸುತ್ತಿದ್ದರು ಎಂಬುದನ್ನು ತಿಳಿದುಕೊಳ್ಳುವುದರಿಂದ ಮಾತ್ರ ಈ ಪ್ರಶ್ನೆಗೆ ಸರಿಯಾಗಿ ಉತ್ತರಿಸಬಹುದು. ವಿದೇಶ ಪ್ರಯಾಣಕ್ಕೆ ಅವರ ವಿರೋಧವಿರಲಿಲ್ಲ; ಆದರೆ ಪ್ರಯಾಣ ಕಾಲದಲ್ಲಿ ಮದ್ಯಪಾನ ಮಾಡಬಾರದೆಂದೂ ಶಾಖಾಹಾರವನ್ನೇ ಉಪಯೋಗಿಸಬೇಕೆಂದೂ ಒತ್ತಾಯಿಸುತ್ತಿದ್ದರು. ಬಾಲವಿಧವೆಯರ ಪುನರ್ವಿವಾಹಕ್ಕೆ ಅವರ ಸಮ್ಮತಿಯಿತ್ತು; ಆದರೆ ವೈದಿಕ ವಿಧಿಗಳಿಗನುಸಾರವಾಗಿ ವಿವಾಹ ನಡೆಯಬೇಕೆಂದು ಹೇಳುತ್ತಿದ್ದರು. ಸ್ತ್ರೀ ಶಿಕ್ಷಣವನ್ನು ಅವರು ಬೆಂಬಲಿಸುತ್ತಿದ್ದರು; ಆದರೆ ಶಿಕ್ಷಣವು ಪ್ರಯೋಜನಕಾರಿಯೂ ಶೋಭಾಯಮಾನವೂ ಆಗಿರಬೇಕೆನ್ನುತ್ತಿದ್ದರು. ಅವಶ್ಯವಿರುವ ಸಂದರ್ಭಗಳಲ್ಲಿ ಅಂತರ್ಜಾತಿ ಭೋಜನಕ್ಕೆ ಅವರ ವಿರೋಧವಿರಲಿಲ್ಲ. ಅಂತರ್ಜಾತಿ ವಿವಾಹಕ್ಕೂ ಅವರ ವಿರೋಧವಿದ್ದಿಲ್ಲ; ಆದರೂ ಇಂತಹ ಮಹತ್ವದ ಸುಧಾರಣೆಯನ್ನು ತರುವ ಮೊದಲು ಉಪಜಾತಿಗಳೊಳಗಿನ ವಿವಾಹಕ್ಕೆ ಪ್ರೋತ್ಸಾಹ ಕೊಡಬೇಕೆಂದು ಹೇಳುತ್ತಿದ್ದರು. ಪ್ರಾಯಸ್ಥರ ವಿವಾಹವನ್ನು ಅವರು ಪ್ರತಿಪಾದಿಸುತ್ತಿದ್ದರು; ಆದರೆ ಕೇವಲ ಭೌತಿಕರೂಪದ ಪಾಶ್ಚಿಮಾತ್ಯ ವಿವಾಹಗಳನ್ನು ಮೆಚ್ಚುತ್ತಿರಲಿಲ್ಲ. ಅಸ್ಪೃಶ್ಯತೆಯು ಮುದ್ರೆ ಹೋಗಬೇಕೆನ್ನುವವರಲ್ಲಿ ಅವರು ಒಬ್ಬರಾಗಿದ್ದರು; ಆದರೆ ಆ ಬಗ್ಗೆ ಅವಸರ ಮಾಡಬಾರದೆನ್ನುತ್ತಿದ್ದರು. ಅವಸರದ ಕ್ರಮಗಳಿಂದ ಅಸ್ಪೃಶ್ಯರ ಸಾಮಾಜಿಕ ಜೀವನದ ಸುಧಾರಣೆಗೆ ತಡೆಯಾಗಬಹುದೆಂದು ಅವರ ಅಭಿಪ್ರಾಯವಾಗಿತ್ತು. ಎಲ್ಲ ಜಾತಿಮತದವರಿಗೂ ತೆರೆದ ಬಾಗಿಲ ಧೋರಣೆ ಅವರದಾಗಿತ್ತು. ಮದ್ಯಪಾನ ಮತ್ತು ಲೈಂಗಿಕ ದುಶ್ಚಟಗಳನ್ನು ಅವರು ಖಂಡಿಸುತ್ತಿದ್ದರು. ನಮ್ಮ ಸಮಾಜಸುಧಾರಕರು ಇಂತಹ ದುಶ್ಚಟಗಳನ್ನು ಬಲವಾದ ಪ್ರಚಾರದಿಂದ ತಡೆಯಬೇಕೆಂದು ಅವರ ಇಚ್ಛೆಯಾಗಿತ್ತು. ತಿಲಕರಿಗೆ ಸುಧಾರಣೆ ಬೇಕು–ನಿಜವಾದ ಸುಧಾರಣೆಯಾದರೆ ಬೇಕು–ಪಾಶ್ಚಿಮಾತ್ಯ ಜೀವನ, ನಡೆ-ನುಡಿಗಳ ಅಂಧ ಅನುಕರಣೆ ಮಾತ್ರ ಬೇಡ."

ತಿಲಕರ ಸಮಾಜಸುಧಾರಣೆಯ ಆದರ್ಶ ಯಾವುದು?

"ಒಬ್ಬ ಬುದ್ಧ, ಕಬೀರ ಅಥವಾ ತುಕಾರಾಮ ಅವರಿಗೆ ಸಮಾಜ ಸುಧಾರಣೆಯಲ್ಲಿ ಆದರ್ಶವಾಗಿದ್ದರು. ಸಮಾಜಸುಧಾರಣಾ ಚಳವಳದ ಮುಖಂಡನು ಅವಶ್ಯವಾಗಿ ಶಾಂತಿಪ್ರಿಯನಾಗಿರಬೇಕು. ಆತನು ಭಾರತೀಯ ನಾಗರಿಕತೆ ಮತ್ತು ಸಂಸ್ಕೃತಿಯ ಬಗ್ಗೆ ಅಭಿಮಾನವುಳ್ಳವನಾಗಬೇಕು ಮತ್ತು ಸಮಾಜದ ಪರಂಪರೆಗಳಲ್ಲಿ ಗೌರವಪಿಟ್ಟು ಸಮಾಜ ಸುಧಾರಣೆಗೆ ಹೊರಡಬೇಕು. ಇಂದು ನಿಷ್ಪ್ರಯೋಜಕವಾಗಿರುವ ಪದ್ಧತಿಗಳನ್ನು ತೊಡೆದುಹಾಕುವ ಧೈರ್ಯ ಸಮಾಜಸುಧಾರಕರಲ್ಲಿರಬೇಕು; ಆದರೆ ಪರನಿಂದೆಯಿಂದ ತನ್ನ ಉದ್ದೇಶಕ್ಕೆ ಅಡ್ಡಿಯನ್ನು ತಂದೊಡ್ಡುವ ರೀತಿಯಲ್ಲಿ ವರ್ತಿಸಬಾರದು...... ಸತ್ಯ, ಪ್ರೇಮ, ಸ್ಥೈರ್ಯಗಳ ಬಲದಿಂದ ವಿರೋಧ, ದುರಭಿಪ್ರಾಯಗಳನ್ನು ಎದುರಿಸಿಕೊಂಡು ಹೋಗುವ ಸಾಮರ್ಥ್ಯ ಸಮಾಜಸುಧಾರಕನಲ್ಲಿರಬೇಕು."

ಅವರ ಕಾಲದ ಸಮಾಜಸುಧಾರಣಾ ಚಳವಳ ಈ ಆದರ್ಶಕ್ಕೆ ಸರಿಯಾಗಿತ್ತೆ? ಅತಲ್ಯೆಯವರು ಬರೆಯುತ್ತಾರೆ:

"ಆದರೆ ತಿಲಕರ ತಾರುಣ್ಯದ ಕಾಲದ ಸಮಾಜಸುಧಾರಣಾ ಚಳವಳ ಈ ಆದರ್ಶಕ್ಕೆ ಸರಿಯಾಗಿರಲಿಲ್ಲ. ಅದು ಮುಖ್ಯವಾಗಿ ಪಾಶ್ಚಿಮಾತ್ಯ ನಾಗರಿಕತೆಯ ಕೂಸು; ನಮ್ಮ ಪರಂಪರೆಯನ್ನು ಅಲ್ಲಗಳೆಯುವುದರಿಂದಲೇ ಅದು ಜನ್ಮತಾಳಿತ್ತು. ಭಾರತೀಯ ಸಮಾಜದ ಮೂಲಭೂತ ಆಧಾರಗಳ ಅಭ್ಯಾಸವನ್ನು ಅದು ಕಡೆಗಣಿಸಿತ್ತು. ಅದು ಅನುಕರಣೆಯ ಸ್ವರೂಪದ್ದಿದ್ದು ಪಾಶ್ಚಿಮಾತ್ಯರ ಜೀವನ, ರೀತಿ-ನೀತಿಗಳ ಪ್ರತಿ ತೆಗೆಯುವುದಷ್ಟೇ ಅದರ ಉದ್ದೇಶವಾಗಿತ್ತು."

ತಿಲಕರು ಮತ್ತು ಸುಧಾರಣಾವಾದಿಗಳೊಳಗೆ ಮೊದಲನೆಯ ಘರ್ಷಣೆ ಏಜ್ ಆಫ್ ಕನ್ಸೆಂಟ್ ಬಿಲ್ (ಒಪ್ಪಿಗೆಯ ಪ್ರಾಯದ ಮಸೂದೆ)ನ ಮೇಲೆ ಪ್ರಾರಂಭವಾಯಿತು. ಹೆಣ್ಣಿನ ಮದುವೆಯ ಪ್ರಾಯವನ್ನು 10ರಿಂದ 12ಕ್ಕೆ ಏರಿಸಬೇಕೆಂಬುದೇ ಮಸೂದೆಯ ಮುಖ್ಯ ಅಂಶ. ಈ ಮಸೂದೆ 1891ರಲ್ಲಿ ಇಂಪೀರಿಯಲ್ ಲೆಜಿಸ್ಲೇಟಿವ್ ಕೌನ್ಸಿಲಿನ ಮುಂದೆ ಬಂತು ಸುಧಾರಣಾವಾದಿಗಳು ಮಸೂದೆಯ ಪೂರ್ಣ ಬೆಂಬಲಿಗರಾಗಿದ್ದರು. ತಿಲಕರು ಅದನ್ನು ವಿರೋಧಿಸಿದರು ಜನತೆಯಲ್ಲಿ ಶಿಕ್ಷಣ

ಪ್ರಸಾರವಾದಂತೆ ಸಮಾಜದಲ್ಲಿರುವ ದೋಷಗಳು ತನ್ನಿಂದ ತಾನೇ ಮಾಯವಾಗುವುವು. ಆದುದರಿಂದ ಇಂತಹ ಮಸೂದೆಯೊಂದರ ಅವಶ್ಯವಿಲ್ಲ; ಎಂದು ಅವರು ವಾದಿಸಿದರು. 'ಕೇಸರಿ' ಯಲ್ಲಿ ಮಸೂದೆಯನ್ನು ಉಗ್ರವಾಗಿ ಟೀಕಿಸಿ ಲೇಖನಗಳನ್ನು ಬರೆದರು ಅಲ್ಲಲ್ಲಿ ಸಭೆಗಳಾದುವು, ಭಾಷಣಗಳಾದುವು. ಸರಕಾರಕ್ಕೆ ಮನವಿಗಳು ಹೋದುವು. ಆದರೆ ಮಸೂದೆಯೇನೋ ಕೌನ್ಸಿಲಿನಲ್ಲಿ ಸ್ವೀಕೃತವಾಗಿಯೇ ಹೋಯಿತು.

ತಿಲಕರು ಸುಧಾರಣೆಯ ವಿರೋಧಿಯಾಗಿರಲಿಲ್ಲ. ಸುಧಾರಣೆಯನ್ನು ಒತ್ತಾಯದಿಂದ ಜನರ ಮೇಲೆ ಹೇರಬಾರದೆಂಬುದೇ ಅವರ ಘೋಷಣೆ. ಸುಧಾರಣೆಯ ಕಾನೂನುಗಳು ಎಲ್ಲ ಜನರಿಗೂ ಅನ್ವಯಿಸುವಂತೆ ಬೇಡ; ಸುಧಾರಣೆಯಲ್ಲಿ ವಿಶ್ವಾಸವಿರುವವರಿಗೆ ಮಾತ್ರ ಅನ್ವಯಿಸುವಂತಿರುವ ಕಾನೂನುಗಳು ಬರಲಿ, ಎಂದು ಅವರ ಅಭಿಪ್ರಾಯ. ಈ ದೃಷ್ಟಿಯಿಂದ ಅವರು ಕೆಲವು ಸೂಚನೆಗಳನ್ನು ಮಾಡಿದರು:

(1) ಹೆಣ್ಣಿನ ವಿವಾಹದ ಪ್ರಾಯ 16 ಮತ್ತು ಗಂಡಿನ ವಿವಾಹದ ಪ್ರಾಯ 20 ಇರಬೇಕು; (2) ವಿಧವೆಯರನ್ನು ವಿವಾಹವಾಗಲು ತಯಾರಿಲ್ಲದವರು 40ರ ಪ್ರಾಯದ ಅನಂತರ ವಿವಾಹವಾಗಬಾರದು; (3) ಮಾದಕ ಪದಾರ್ಥಗಳನ್ನು ಪೂರ್ಣ ನಿಷೇಧಿಸಬೇಕು; (4) ವರದಕ್ಷಿಣೆಯನ್ನು ಪ್ರತಿಬಂಧಿಸಬೇಕು; (5) ವಿಧವೆಯರ ಕೇಶಚ್ಛೇದನವನ್ನು ನಿಲ್ಲಿಸಬೇಕು; (6) ಪ್ರತಿಯೊಬ್ಬ ಸುಧಾರಕನ ತಿಂಗಳ ಆದಾಯದ ಹತ್ತನೇ ಒಂದಂಶವನ್ನು ಸಾರ್ವಜನಿಕ ಕಾರ್ಯಗಳಿಗಾಗಿ ವಿನಿಯೋಗಿಸಬೇಕು.

ತಿಲಕರ ಈ ಸೂಚನೆಗಳನ್ನು ಪರಿಶೀಲಿಸಲು ಒಂದು ಸಭೆ ಕರೆಯಲಾಯಿತು. ಆ ಸಭೆಗೆ ಸುಧಾರಣಾವಾದಿಗಳ ಮುಖಂಡ ರಾನಡೆಯವರೂ ಬಂದಿದ್ದರು. ತಿಲಕರು ತಮ್ಮ ಭಾಷಣದಲ್ಲಿ ಹೀಗೆಂದರು:

"ಸಮಾಜಸುಧಾರಣೆಯ ಕುರಿತು ಮಾತು ಬೆಳೆದಿದೆ; ಕಾರ್ಯ ಮುಂದುವರಿದಿಲ್ಲ. ಇದರ ಪರಿಣಾಮವಾಗಿ ಎಲ್ಲರೂ ಒಪ್ಪಿಕೊಳ್ಳುವ ಅತ್ಯಂತ ಮುಖ್ಯ ಸುಧಾರಣೆಗಳು ಕೂಡ ಕಾರ್ಯರೂಪದಲ್ಲಿ ಬಂದಿಲ್ಲ. ಯಾವ ಸುಧಾರಣೆಗಳು ಬೇಕು ಎಂದಷ್ಟೇ ನೋಡಿದರೆ ಸಾಲದು. ಅವುಗಳನ್ನು ಕಾರ್ಯಗತಗೊಳಿಸುವುದು ಸಾಧ್ಯವೆ? ಅವನ್ನು ಹೇಗೆ ಜನಪ್ರಿಯಗೊಳಿಸಬಹುದು? ಎಂಬುದನ್ನೂ ಯೋಚಿಸಬೇಕು. ಸುಧಾರಣೆಯ

ಭರದಲ್ಲಿ ಸುಧಾರಕರು ಮತ್ತು ಜನತೆಯ ಮಧ್ಯೆ ಅಂತರ ಬೆಳೆಯುತ್ತ ಹೋಗಬಾರದು. ಸಾರ್ವಜನಿಕ ಅಭಿಪ್ರಾಯ ಯಾವಾಗಲೂ ನಮ್ಮ ಕಡೆಗಿರುವಂತೆ ನಾವು ನೋಡಬೇಕು. ಸುಧಾರಣೆಗಳಿಗೆ ಧರ್ಮದ ಅನುಮೋದನೆಯನ್ನು ಪಡೆಯುವುದರಿಂದ ಇದು ಸಾಧ್ಯ. ನಾನು ಸಮಾಜ ಸುಧಾರಣೆಯ ಪರವಾಗಿ ಇದ್ದೇನೆ"

ರಾನಡೆಯವರು ತಿಲಕರ ಭಾಷಣವನ್ನು ಸ್ವಾಗತಿಸಿದರೇನೋ ನಿಜ. ಆದರೆ ಅವರ ಸೂಚನೆಗಳನ್ನು ಅನುಸರಿಸಲು ಎಷ್ಟು ಜನ ಮುಂದೆ ಬರಬಹುದೆಂಬ ಬಗ್ಗೆ ಸಂಶಯ ವ್ಯಕ್ತಪಡಿಸಿದರು.

'ಏಜ್ ಆಫ್ ಕನ್ಸೆಂಟ್ ಬಿಲ್'ನ ಮೇಲಿನ ವಾದ ಕಡಿಮೆಯಾಗುತ್ತ ಬರುವಷ್ಟರಲ್ಲಿಯೇ ಇನ್ನೊಂದು ವಿವಾದವೆದ್ದಿತು. ಪಂಡಿತಾ ರಮಾಬಾಯಿ ನಮ್ಮ ದೇಶದ ಹೆಸರಾಂತ ಸಮಾಜಸೇವಿಕೆಯರಲ್ಲಿ ಒಬ್ಬರು. ಈಕೆ ಮೊದಲು ಹಿಂದುವಾಗಿದ್ದು ಅನಂತರ ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದವರು. ಅವರು ಅಮೆರಿಕನ್ ಮಿಶನರಿಗಳ ಸಹಾಯದಿಂದ ಪೂನದಲ್ಲಿ ಶಾರದಾ ಸದನ ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದರು. ಭಾರತೀಯ ಹೆಣ್ಣುಮಕ್ಕಳಿಗೆ, ಮುಖ್ಯವಾಗಿ ಬಾಲವಿಧವೆಯರಿಗೆ, ಶಿಕ್ಷಣಕೊಡುವ ಉದ್ದೇಶ ಸಂಸ್ಥೆಯದು. ರಾನಡೆಯವರೇ ಮೊದಲಾದ ಸುಧಾರಣಾವಾದಿಗಳು ಈ ಸಂಸ್ಥೆಯ ಬೆಂಬಲಿಗರಾಗಿದ್ದರು. ಕ್ರಿಶ್ಚಿಯನ್ ಹೆಣ್ಣುಮಗಳೊಬ್ಬಳು ನಡೆಯಿಸಿಕೊಂಡು ಬರುವ ಸಂಸ್ಥೆಯಿಂದ ಹಿಂದುಗಳು ಶಿಕ್ಷಣದ ಸವಲತ್ತುಗಳನ್ನು ಪಡೆಯುವುದರಲ್ಲಿ ಯಾವ ತಪ್ಪೂ ಇಲ್ಲ ಎಂದು ಇವರ ವಾದ. ತಿಲಕರು ಶಾರದಾ ಸದನದ ವಿರೋಧಿಗಳು. 'ಕೇಸರಿ'ಯಲ್ಲಿ ಅವರು ಸಂಸ್ಥೆಯನ್ನು ತೀವ್ರವಾಗಿ ಟೀಕಿಸಿದರು. ಶಾರದಾ ಸದನದ ಉದ್ದೇಶ ಶಿಕ್ಷಣ ಪ್ರಸಾರವಾಗಿರದೆ, ಹಿಂದೂ ಹುಡುಗಿಯರನ್ನು ಮತಾಂತರಗೊಳಿಸುವುದೇ ಆಗಿದೆ ಎಂದು ಆರೋಪಿಸಿದರು. ಆ ಸಂಸ್ಥೆಯನ್ನು ಬೆಂಬಲಿಸುತ್ತಿದ್ದ ಸುಧಾರಣಾವಾದಿಗಳನ್ನು ಹಿಂದೂ ಧರ್ಮದ ದ್ರೋಹಿಗಳೆಂದು ಕರೆದರು.

ಆರೋಪ-ಪ್ರತ್ಯಾರೋಪಗಳಾದ ಮೇಲೆ ಸ್ವಲ್ಪ ಕಾಲ ಎರಡು ಪಕ್ಷದವರೂ ಮೌನವಾಗಿದ್ದರು. ಅಷ್ಟರಲ್ಲಿ ಸದನದೊಳಗೆ ನಡೆಯುತ್ತಿದ್ದ ಕೆಲವೊಂದು ಸಂಗತಿಗಳು ಹೊರಬಿದ್ದುವು. ತಿಲಕರು 'ಕೇಸರಿ'ಯಲ್ಲಿ ಹಿಂದಿನ ಆರೋಪವನ್ನೇ ಪುನಃ ಹೊರಿಸಿದರು. ಸದನದೊಳಗೆ ಹಿಂದೂ

ಹುಡುಗಿಯರನ್ನು ಕ್ರಿಶ್ಚಿಯನ್ ಮತದತ್ತ ಆಕರ್ಷಿಸುವ ಪ್ರಯತ್ನ ಹೇಗೆ ನಡೆದಿದೆ ಎಂದು ಆಧಾರಸಹಿತ ಸಾಧಿಸಿದರು. ಈಗ ರಾನಡೆಯವರಿಗೆ ಕೂಡ ತಿಲಕರ ಆರೋಪ ಸರಿಯೆಂದು ಕಂಡಿತು. ಅವರು ರಾಜಿನಾಮೆ ಯಿತ್ತು ಸಂಸ್ಥೆಯ ಸಂಬಂಧವನ್ನು ಕಡಿದುಕೊಂಡರು. ಸ್ವಲ್ಪ ಕಾಲದಲ್ಲಿ ಅದು ಬಹಿರಂಗವಾಗಿಯೇ ಕ್ರಿಶ್ಚಿಯನ್ ಸಂಸ್ಥೆಯಾಯಿತು. 'ಶಾರದಾ ಸದನ' ದ ಬದಲು ಅದು 'ಮುಕ್ತಿ ಸದನ' ವಾಯಿತು.

ಸುಧಾರಣಾವಾದಿಗಳು ಮತ್ತು ತಿಲಕರೊಳಗೆ 'ಏಜ್ ಆಫ್ ಕನ್ಸೆಂಟ್ ಬಿಲ್' ನಿಂದ ಪ್ರಾರಂಭವಾದ ವಿರೋಧ 1893 – 94 ರಲ್ಲಿ ಮುಂಬಯಿ – ಪೂನಾಗಳಲ್ಲಾದ ಹಿಂದೂ – ಮುಸ್ಲಿಂ ದಂಗೆಯ ಕಾಲದಲ್ಲಿ ಮತ್ತು ಗಣಪತಿ – ಶಿವಾಜಿ ಉತ್ಸವಗಳ ಸಂಬಂಧದಲ್ಲಿ ಇನ್ನೂ ಬೆಳೆಯಿತು.

ತಿಲಕರು ಯಾವ ದೃಷ್ಟಿಯಿಂದಲೂ ಮುಸ್ಲಿಮರ ವೈರಿಯಲ್ಲ. ಆದರೆ ಮುಸ್ಲಿಂ ಅಲ್ಪ ಸಂಖ್ಯಾಕರ ಅನುಚಿತ ಬೇಡಿಕೆಗಳನ್ನು ಮತ್ತು ಅವರಿಗೆ ಸರಕಾರ ತನ್ನ ಪಕ್ಷಪಾತದ ನೀತಿಯಿಂದ ಕೊಡುತ್ತಿದ್ದ ಪ್ರೋತ್ಸಾಹವನ್ನು 'ಕೇಸರಿ' ಯಲ್ಲಿ ಬಲವಾಗಿ ಟೀಕಿಸುತ್ತಿದ್ದರು. ಸುಧಾರಣಾವಾದಿಗಳು ಹಿಂದುಗಳಿಗೆ ಅನ್ಯಾಯವಾಗುತ್ತಿದೆ ಎಂಬುದನ್ನು ಒಪ್ಪಿಕೊಂಡರೂ ತಿಲಕರ ಪಕ್ಷವನ್ನು ಬಲಪಡಿಸಲು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಬದಲಾಗಿ ಅವರ ದಾರಿಯಲ್ಲಿ ಅಡೆತಡೆಗಳನ್ನೇ ತಂದೊಡ್ಡಿದರು. ತಿಲಕರು ಪ್ರಾರಂಭಿಸಿದ ಶಿವಾಜಿ ಮತ್ತು ಗಣಪತಿ ಉತ್ಸವಗಳನ್ನು ಅವರು ಬಹಿರಂಗವಾಗಿಯೇ ಖಂಡಿಸುತ್ತಿದ್ದರು.

ಆ ವರೆಗೆ ಪ್ರತಿವರ್ಷ ಕಾಂಗ್ರೆಸ್ ಅಧಿವೇಶನದ ಒಟ್ಟಿಗೆ ಸಾಮಾಜಿಕ ಪರಿಷತ್ತೂ ನಡೆಯುತ್ತಿತ್ತು. 1895 ರಲ್ಲಿ ಪೂನಾದಲ್ಲಿ ಕಾಂಗ್ರೆಸ್ ಅಧಿವೇಶನ ಸೇರುವುದೆಂದು ನಿಶ್ಚಯವಾಗಿತ್ತು. ತಿಲಕರು ಮತ್ತು ಅವರ ಅನುಯಾಯಿಗಳು ಸಾಮಾಜಿಕ ಪರಿಷತ್ತು ಕಾಂಗ್ರೆಸ್ ಅಧಿವೇಶನದೊಡನೆ ಸೇರಬಾರದೆಂದು ಆಕ್ಷೇಪವೆತ್ತಿದರು. ಈ ವಿವಾದವು ಗಂಭೀರ ಸ್ವರೂಪಕ್ಕೆ ಮುಟ್ಟಿದುದರಿಂದ ಅದನ್ನು ಬಗೆಹರಿಸುವುದಕ್ಕೆ ಹೊರಗಿನವರು ಪ್ರವೇಶಿಸಬೇಕಾಯಿತು. ತಿಲಕರು ಮೊದಲು ಅಧಿವೇಶನದ ಸ್ವಾಗತಸಮಿತಿಯ ಕಾರ್ಯದರ್ಶಿಯಾಗಿದ್ದರು. ಕಾಂಗ್ರೆಸಿನ ಮುಂಬಯಿ ಮುಖಂಡರು ಇದರಿಂದ ತೊಂದರೆಗಳು ಏಳಬಹುದೆಂದು ಯೋಚಿಸಿ ಒಟ್ಟಿಗೆ ಏಳು ಮಂದಿ

ಕಾರ್ಯದರ್ಶಿಗಳು ಇರಬೇಕೆಂದು ನಿಶ್ಚಯಿಸಿದರು— ಇಬ್ಬರು ತಿಲಕರ ಪಕ್ಷದಿಂದ; ಇಬ್ಬರು ಅವರ ವಿರೋಧಿ ಪಕ್ಷದಿಂದ; ಮತ್ತು ಮೂವರು ಮುಂಬಯಿಯಿಂದ. ಈ ವ್ಯವಸ್ಥೆ ಸರಿಯಾಗಿ ನಡೆಯಲಿಲ್ಲವಾದ ಕಾರಣ ತಿಲಕರು ತಮ್ಮ ಸ್ಥಾನಕ್ಕೆ ರಾಜಿನಾಮೆ ಕೊಡಬೇಕಾಯಿತು. ಆದರೆ ಅಧಿವೇಶನ ಯಶಸ್ವಿಯಾಗಿ ನಡೆಯುವುದಕ್ಕೆ ಅವರು ಯಾವ ತಡೆಯನ್ನೂ ಮಾಡಲಿಲ್ಲ.

ಅಧಿವೇಶನಕ್ಕೆ ಪ್ರತಿನಿಧಿಗಳನ್ನಾರಿಸುವುದಕ್ಕಾಗಿ ಮಹಾರಾಷ್ಟ್ರದಲ್ಲೆಲ್ಲ ಸಭೆಗಳು ನಡೆದುವು. ಅದೇ ಸಭೆಗಳಲ್ಲಿ ಕಾಂಗ್ರೆಸ್ ಅಧಿವೇಶನದ ಮಂಟಪದಲ್ಲೇ ಸಾಮಾಜಿಕ ಪರಿಷತ್ತನ್ನು ನಡೆಯಗೊಡಬಾರದು ಎಂಬ ಗೊತ್ತುವಳಿಗಳಾದುವು. ಆದರೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಾಮಾಜಿಕ ಪರಿಷತ್ತನ್ನು ನಡೆಸಲು ಬೇಕಾದ ಅನುಮತಿ ಕೊಟ್ಟಿತು. ರಾನಡೆಯವರು ಮಾತ್ರ ಪರಿಷತ್ತನ್ನು ಕಾಂಗ್ರೆಸ್ ಮಂಟಪದಲ್ಲಿ ಜರಗಿಸದೆ, ಫರ್ಗ್ಯುಸನ್ ಕಾಲೇಜಿನಲ್ಲಿ ಜರಗಿಸಿ ಪರಿಸ್ಥಿತಿಯಿಂದ ತಪ್ಪಿಸಿಕೊಂಡರು.

ಹೀಗೆ ಸಾಮಾಜಿಕ ರಂಗದಲ್ಲಿ ಕಾಣಿಸಿಕೊಂಡ ಎರಡು ಪಕ್ಷಗಳು ತಮ್ಮ ಕಾರ್ಯಕ್ಷೇತ್ರವನ್ನು ರಾಜಕೀಯ ರಂಗಕ್ಕೂ ಪಸರಿಸಿದುವು. ರಾನಡೆಯವರ ಮತ್ತು ಗೋಖಲೆಯವರ ಪಕ್ಷ ಮಂದಗಾಮಿ ಅಥವಾ ಉದಾರವಾದಿ ಪಕ್ಷವಾಯಿತು. ತಿಲಕರ ಪಕ್ಷ ತೀವ್ರಗಾಮಿ ಅಥವಾ ರಾಷ್ಟ್ರೀಯವಾದಿ ಪಕ್ಷವಾಯಿತು. ಈ ಎರಡೂ ಪಕ್ಷಗಳು ಕಾಂಗ್ರೆಸಿನೊಳಗೇ ಇದ್ದುಕೊಂಡು, ಅವುಗಳೊಳಗಿನ ಹೋರಾಟ ಕೆಲವು ವರ್ಷಗಳ ವರೆಗೆ ಮುಂದುವರಿಯಿತು. ಅದರ ಸ್ವರೂಪವನ್ನು ನಾವು ಮುಂದೆ ಕಾಣಲಿದ್ದೇವೆ.

ಸಮಾಜಸುಧಾರಣೆಯ ವಿಷಯದಲ್ಲಿ ತಿಲಕರು ಮತ್ತು ಸುಧಾರಣಾವಾದಿಗಳೊಳಗೆ ನಡೆಯುತ್ತಿದ್ದ ಹೋರಾಟ 1895ರ ಮುನಿಸಿಪಲ್ ಮತ್ತು ಕೌನ್ಸಿಲು ಚುನಾವಣೆಗಳ ಕಾಲದಲ್ಲಿಯೂ ಕಾಣಿಸಿಕೊಂಡಿತು. ಎರಡೂ ಪಕ್ಷಗಳಿಗೆ ಸೇರಿದವರು ಚುನಾವಣೆಗಳಲ್ಲಿ ಸ್ಪರ್ಧಿಸಿದರು. ತಿಲಕರ ಅನುಯಾಯಿಗಳಿಬ್ಬರು ಸುಧಾರಣಾವಾದಿ ಹುರಿಯಾಳುಗಳಿಬ್ಬರನ್ನು ಸೋಲಿಸಿ ಪೂನಾ ನಗರಸಭೆಗೆ ಆರಿಸಿಬಂದರು. ಸ್ವತಃ ತಿಲಕರೇ ಮುಂಬಯಿ ಲೆಜಿಸ್ಲೇಟಿವ್ ಕೌನ್ಸಿಲಿಗೆ ಆರಿಸಿ ಹೋಗಿ ಪ್ರಚಂಡ ವಿಜಯ ಗಳಿಸಿದರು.

———೨೭———

*

೫

# ಜನತೆಯ ಸೇವಕ - ಸರಕಾರದ ಅತಿಥಿ

ತಿಲಕರು ವಿಧಾನಪರಿಷತ್ತಿನ ಸದಸ್ಯರಾಗಿ ಎಷ್ಟು ಮಾಡಲು ಸಾಧ್ಯವಿದೆಯೋ ಅಷ್ಟು ಮಾಡಿದರು. ಆಗಿನ ರಾಜ್ಯಘಟನೆಯ ಆವರಣದೊಳಗೆ ವಿಧಾನಪರಿಷತ್ತಿನ ಸದಸ್ಯರಿಗೆ ಸರಕಾರವನ್ನು ಸೌಮ್ಯವಾಗಿ ಟೀಕಿಸುವುದಕ್ಕಿಂತ ಹೆಚ್ಚೇನೂ ಅಧಿಕಾರವಿರಲಿಲ್ಲ. ಸರಕಾರದ ಆಗುಹೋಗುಗಳನ್ನು ಸರಿಯಾಗಿ ಅಭ್ಯಾಸಿಸುತ್ತಿದ್ದ ತಿಲಕರು ಈ ಕೆಲಸವನ್ನು ಸಮರ್ಥ ರೀತಿಯಿಂದಲೇ ನೆರವೇರಿಸಿದರು. ಆದರೆ ಅವರ ನಿಜವಾದ ಸ್ಥಾನ ವಿಧಾನಪರಿಷತ್ತಿನ ಸಭಾಭವನದೊಳಗೆ ಇರಲಿಲ್ಲ ಭಯಂಕರ ಬರಗಾಲಕ್ಕೆ ತುತ್ತಾಗಿದ್ದ ಮಹಾರಾಷ್ಟ್ರದ ಜನತೆ ಅವರನ್ನು ಕರೆಯುತ್ತಿತ್ತು. ಅಷ್ಟರಲ್ಲೇ ಅವರ ಮೇಲೆ ರಾಜದ್ರೋಹದ ಆರೋಪ ಬಂದುದರಿಂದ ಅವರು ವಿಧಾನಪರಿಷತ್ತಿನೊಡನಿದ್ದ ತಮ್ಮ ಅಲ್ಪ ಕಾಲದ ಸಂಬಂಧವನ್ನೂ ಪೂರ್ಣ ಕಡಿದುಕೊಳ್ಳಬೇಕಾಯಿತು.

ಸಾವಿರದ ಎಂಟುನೂರ ತೊಂಭತ್ತಾರರ ಬರಗಾಲದ ಕಾಲದಲ್ಲಿ ತಿಲಕರು ಮಾಡಿದ ಕೆಲಸ ಅವರ ಜೀವನದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲು ಯೋಗ್ಯವಾದುದು. ಜನತೆ ಬರಗಾಲದ ಕಿಚ್ಚಿನಲ್ಲಿ ದಹಿಸುತ್ತಿತ್ತು. ಬ್ರಿಟಿಷ್ ಅಧಿಕಾರಿಗಳು ಜನರ ಕಷ್ಟಗಳಲ್ಲಿ ನಿರಾಸಕ್ತರಾಗಿ, ತಮ್ಮ ಸುಖದಲ್ಲಷ್ಟೇ ತಲ್ಲೀನರಾಗಿದ್ದರು. ಮಾಮಲತೆದಾರರಂತಹ ಸಣ್ಣಪುಟ್ಟ ಅಧಿಕಾರಿಗಳು ಯಾವ ರೀತಿಯಿಂದಾದರೂ ಕಂದಾಯ ವಸೂಲು ಮಾಡಿ ತಮ್ಮ ಮೇಲಧಿಕಾರಿಗಳಿಂದ ಬೆನ್ನುಚಪ್ಪರಿಸಿಕೊಳ್ಳಿಸುವುದರಲ್ಲಿ ನಿರತರಾಗಿದ್ದರು. ತಿಲಕರು ಮಾತ್ರ ಊರಿಂದೂರಿಗೆ ತಿರುಗಾಡಿ ಹಗಲು ರಾತ್ರಿಯೆನ್ನದೆ ಬರಗಾಲ ಪೀಡಿತ ಜನರ ಸೇವೆ ಮಾಡಿದರು. ಅಗ್ಗದರದ ಅಂಗಡಿಗಳನ್ನು ತೆರೆದು ಜನರಿಗೆ ಧಾನ್ಯ ಒದಗಿಸಿದರು ನೌಕರಶಾಹಿ ನಡೆಸುತ್ತಿದ್ದ ಅನ್ಯಾಯ-ಅನಾಚಾರಗಳನ್ನು ಬಯಲಿಗೆಳೆದರು. ಜನರಿಗೆ ಅವರ ಹಕ್ಕುಗಳ ಮನವರಿಕೆ ಮಾಡಿಕೊಟ್ಟರು. ಜನರ ಕಷ್ಟಗಳನ್ನು ಹೇಗೆ

ನಿವಾರಿಸಬಹುದೆಂದು ಸರಕಾರಕ್ಕೆ ಸಲಹೆ-ಸೂಚನೆಗಳನ್ನು ಕೊಟ್ಟರು

ಬರಗಾಲದಿಂದ ಹೊಟ್ಟೆಗಿಲ್ಲದೆ ನರಳುತ್ತಿದ್ದರೂ ಕೆಲವರು, ಅಧಿಕಾರಿಗಳ ಕಿಡಿಗಣ್ಣಿಗೆ ಹೆದರಿ ತಮ್ಮ ಮನೆಮಾರುಗಳನ್ನು ಮಾರಿಯಾದರೂ ಕಂದಾಯ ತೆರುತ್ತಿದ್ದರು. ಅಂಥವರಿಗೆ ತಿಲಕರು ಕೇಳಿದರು: "ಯಾರೂ ಸಾಯಬಾರದೆಂದು ಮಹಾರಾಣಿಯವರ ಆಶಯವಿರುವಾಗ, ಎಲ್ಲರೂ ಬದುಕಿ ಉಳಿಯಬೇಕೆಂದು ಗವರ್ನರರು ಸಾರುತ್ತಿರುವಾಗ, ಬರಗಾಲದ ನಿವಾರಣೆಗಾಗಿ ಅವಶ್ಯಬಿದ್ದರೆ ಸಾಲ ಎತ್ತಲೂ ತಯಾರಿರುವೆವೆಂದು ರಾಜ್ಯ ಕಾರ್ಯದರ್ಶಿಗಳು ಹೇಳುತ್ತಿರುವಾಗ ಅಂಜುಬುರುಕತನದಿಂದ ಮತ್ತು ಹಸಿವಿನಿಂದ ನಿಮ್ಮನ್ನು ನೀವೇ ಏಕೆ ಕೊಲೆಮಾಡಿಕೊಳ್ಳುತ್ತಿದ್ದೀರಿ? ನಿಮ್ಮಲ್ಲಿ ಹಣವಿದ್ದರೆ ಸರಕಾರದ ಸಾಲವನ್ನು ಅವಶ್ಯವಾಗಿ ತೀರಿಸಿರಿ. ಆದರೆ, ನಿಮ್ಮಲ್ಲಿ ಹಣವಿಲ್ಲದಿರುವಾಗ, ಕೆಳವರ್ಗದ ನೌಕರರ ಕೋಪದಿಂದ ತಪ್ಪಿಸಿಕೊಳ್ಳಬೇಕೆಂದು ಅದೇಕೆ ಆಸ್ತಿ, ಮನೆಗಳನ್ನು ಮಾರುತ್ತಿದ್ದೀರಿ? ಸಾವಿನ ದವಡೆಯಲ್ಲಿರುವಾಗಲೂ ನಿಮಗೆ ಧೈರ್ಯದಿಂದಿರುವುದು ಸಾಧ್ಯವಿಲ್ಲವೆ?" ತಿಲಕರ ನೊಂದ ಹೃದಯ ಮತ್ತೂ ಹೇಳಿತು: "ನಾವು ಎಷ್ಟು ಬರಗಾಲಗಳನ್ನೂ ಎದುರಿಸಬಹುದು; ಆದರೆ ಕುರಿಗಳಂತಹ ಈ ಜನರನ್ನು ಕಟ್ಟಿಕೊಂಡು ಏನುಮಾಡಲಿ?"

ಬರಗಾಲದ ಸಮಯದಲ್ಲಿ ತಿಲಕರು ತಮ್ಮ ಹರಿತವಾದ ಲೇಖನಿಯನ್ನು 'ಕೇಸರಿ' ಮತ್ತು 'ಮರಾಠಾ'ದಲ್ಲಿ ಉಪಯೋಗಿಸುತ್ತಿದ್ದರು. "ಇಂತಹ ಬರಗಾಲ ಇಂಗ್ಲಂಡಿನಲ್ಲಿ ಸಂಭವಿಸಿದ್ದರೆ ಮತ್ತು ಅಲ್ಲಿಯ ಪ್ರಧಾನ ಮಂತ್ರಿಗಳು ಗವರ್ನರ ಜನರಲ್ ಲಾರ್ಡ್ ಎಲ್ಗಿನರಷ್ಟೇ ಉದಾಸೀನರಾಗಿರುತ್ತಿದ್ದರೆ, ಅವರ ಸರಕಾರ ಒಂದೇ ವಾರದೊಳಗೆ ಕುಸಿದು ಬೀಳುತ್ತಿತ್ತು" ಎಂದು ಅವರು 'ಕೇಸರಿ'ಯಲ್ಲಿ ಬರೆದರು. ಆದರೆ ತಿಲಕರು ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿ ಆಹಾರಕ್ಕಾಗಿ ನಡೆದ ದಂಗೆಗಳನ್ನು ಸಮರ್ಥಿಸಲಿಲ್ಲ. "ಸಂತೆ-ಅಂಗಡಿಗಳನ್ನು ಏಕೆ ಲೂಟಿಮಾಡುವಿರಿ? ಕಲೆಕ್ಟರರಲ್ಲಿ ಹೋಗಿ ಅನ್ನ ಮತ್ತು ಕೆಲಸ ಕೊಡುವಂತೆ ಕೇಳಿರಿ. ಅದು ಅವರ ಕರ್ತವ್ಯ" ಎಂದು ಅವರೆನ್ನುತ್ತಿದ್ದರು.

ದಿನದಿಂದ ದಿನಕ್ಕೆ ತಿಲಕರ ಪ್ರಭಾವ ಮಹಾರಾಷ್ಟ್ರದಲ್ಲಿ ಹೆಚ್ಚುತ್ತಿತ್ತು. ಬರಗಾಲದ ಕಾಲದಲ್ಲಿ ಅವರು ಸಲ್ಲಿಸಿದ ಸೇವೆ ಅವರನ್ನು ಇನ್ನೂ ಜನ

ಪ್ರಿಯರಾಗಿ ಮಾಡಿತ್ತು. ಜನಸಾಮಾನ್ಯರು ಕೂಡ ಅವರ ಮುಖಂಡತ್ವ ದಲ್ಲಿ ಸಂಘಟಿತರಾಗುತ್ತಿದ್ದರು. ಪ್ರಜೆಗಳೆಂದರೆ ತಮ್ಮ ಸ್ವಂತದ ಸೊತ್ತೆಂದು ತಿಳಿಯುತ್ತಿದ್ದ ಸಾಮ್ರಾಜ್ಯಶಾಹಿ ಸರಕಾರ ಇದನ್ನೆಲ್ಲ ಹೇಗೆ ಸಹಿಸೀತು? ಬರಗಾಲದ ನಿವಾರಣೆಗಾಗಿ ತಿಲಕರು ಸರಕಾರಕ್ಕೆ ಕೊಡುತ್ತಿದ್ದ ಸಲಹೆ-ಸಹಕಾರಗಳು ಕೂಡ ಅಧಿಕಾರಿಗಳಿಗೆ ಸರಕಾರದ ವಿರುದ್ಧ ಉಪಯೋಗಿಸುವ ಅಸ್ತ್ರಗಳಾಗಿ ಕಂಡುವು.

ಬರಗಾಲದ ಹಿಂದಿನಿಂದಲೇ ಪ್ಲೇಗ್ ರೋಗದ ಹಾವಳಿ ಬಂತು. ಆಗಿನ ಕಾಲದಲ್ಲಿ ಪ್ಲೇಗ್ ಎಂದರೆ ಒಂದು ಮಹಾಮಾರಿ. ಒಮ್ಮೆ ಕಾಣಿಸಿಕೊಂಡಿತೆಂದರೆ ಸಾವಿರಾರು ಜನರನ್ನು ಬಲಿತೆಗೆದುಕೊಳ್ಳುತ್ತಿತ್ತು.

ಈಗಲೂ ತಿಲಕರು ಜನರ ಮಧ್ಯೆ ನಿಂತು ಅವರ ಸೇವೆಮಾಡಿದರು. ರೋಗವನ್ನು ತಡೆಯಲು ಕೈಕೊಂಡ ಕಾರ್ಯಕ್ರಮಗಳಲ್ಲಿ ಸರಕಾರದೊಡನೆ ಸಹಕರಿಸಿದರು. ಜನರ ಸಂಕಷ್ಟಗಳನ್ನು ಸರಕಾರಕ್ಕೆ ತಿಳಿಯ ಹೇಳಿದರು. ಆಸ್ಪತ್ರೆಗಳನ್ನು ತೆರೆದು ರೋಗಪೀಡಿತರ ಶುಶ್ರೂಷೆಯ ವ್ಯವಸ್ಥೆಮಾಡಿದರು.

ತಿಲಕರು ಸರಕಾರದೊಡನೆ ಸಹಕರಿಸುತ್ತಿರುವುದನ್ನು ಕಂಡು ಅವರ ರಾಜಕೀಯ ವಿರೋಧಿಗಳು 'ಪೂನದ ಸಿಂಹ ಈಗ ಪಳಗಿದೆ' ಎಂದು ಅಣಕಿಸತೊಡಗಿದರು. ಆದರೆ ಅದೇ ಜನ ಮಾತ್ರ ಪೂನವನ್ನು ಬಿಟ್ಟು, ಪ್ಲೇಗ್ ಇಲ್ಲದ ಸ್ಥಳದಲ್ಲಿ ಸುಖವಾಗಿ ಕಾಲಕಳೆಯುತ್ತಿದ್ದರು!

ರೋಗವನ್ನು ತಡೆಗಟ್ಟಲು ಸರಕಾರ ತೀವ್ರವಾದ ಕ್ರಮಗಳನ್ನೇನೋ ಕೈಗೊಂಡಿತು ಆದರೆ ಯಾವ ಕ್ರಮವಾದರೂ ಸಫಲವಾಗಬೇಕಾದರೆ ಜನತೆಯ ಬೆಂಬಲ-ಸಹಕಾರ ಅವಶ್ಯ. ಬೆಂಬಲ-ಸಹಕಾರ ಪಡೆಯಲು ಸರಕಾರ ಪ್ರಯತ್ನಿಸಲಿಲ್ಲ. ಜನತೆ ತಾವಾಗಿ ಕೊಟ್ಟ ಸಹಕಾರವನ್ನು ಸ್ವೀಕರಿಸುವ ಉದಾರತೆಯನ್ನೂ ತೋರಿಸಲಿಲ್ಲ. ಅದರ ಬದಲಾಗಿ, ಜನರಿಂದ ಆರಿಸಲ್ಪಟ್ಟ ಪೂನ ನಗರಸಭೆಯ ಕೈಯಲ್ಲಿದ್ದ ಪ್ಲೇಗ್ ನಿವಾರಣೆಯ ಕೆಲಸವನ್ನೂ ಸರಕಾರ ಕಸಿದುಕೊಂಡು, ಆ ಕೆಲಸವನ್ನು ಒಂದು ಪ್ರತ್ಯೇಕ ಸಮಿತಿಗೆ ಒಪ್ಪಿಸಿತು. ಇದು ಮುಖ್ಯವಾಗಿ ಯುರೋಪಿಯನರಿಂದಲೇ ತುಂಬಿದ ಸಮಿತಿ. ರ್‍ಯಾಂಡ್ ಎಂಬವರು ಈ ಸಮಿತಿಯ ಅಧ್ಯಕ್ಷರು. ಈ ಸಾಹೇಬರು ಎಂದೂ ಭಾರತೀಯರ ಪ್ರೀತಿಯನ್ನು ಸಂಪಾದಿಸಿದವರಲ್ಲ. ಭಾರತೀಯರ ಮನೋವೃತ್ತಿಯನ್ನು ತಿಳಿಯಲು ಪ್ರಯತ್ನಿಸಿದವರೂ ಅಲ್ಲ.

ಅಂಥವರ ಮುಖಂಡತ್ವದಲ್ಲಿದ್ದ ಸಮಿತಿ ಜನಮೆಚ್ಚುವಂತೆ ಹೇಗೆ ಕೆಲಸ ನಡೆಸೀತು?

ಪ್ಲೇಗ್ ಸಮಿತಿಯ ಕಾರ್ಯ ತೃಪ್ತಿಕರವಾಗಿರಲಿಲ್ಲ. ರೋಗ ತಗಲಿದ ವ್ಯಕ್ತಿಯನ್ನು ಆಸ್ಪತ್ರೆಗೆ ಸೇರಿಸಿದೊಡನೆಯೇ ಅವನ ಮನೆಯವರನ್ನೆಲ್ಲ ಪ್ರತ್ಯೇಕ ಸ್ಥಳಕ್ಕೆ ಕಳುಹಿಸಲಾಗುತ್ತಿತ್ತು. ಅವರ ಮನೆ - ಆಸ್ತಿಗಳನ್ನು ನೋಡಿಕೊಳ್ಳಲು ಯಾರೂ ಇರುತ್ತಿರಲಿಲ್ಲ. ರೋಗದ ಅಣುಗಳು ತಾಗಿದೆಯೆಂದು ಕಂಡ ಸಾಮಾನುಗಳನ್ನು ಸುಟ್ಟುಬಿಡುತ್ತಿದ್ದರು. ಇದರಿಂದಾಗಿ ಜನ ಪ್ಲೇಗ್ ಇದೆಯೆಂದು ಗೊತ್ತಾದರೂ ಅದನ್ನು ಸರಕಾರಕ್ಕೆ ತಿಳಿಸಲು ಹಿಂಜರಿಯುತ್ತಿದ್ದರು.

ಸರಕಾರದ ನೀತಿಯಿಂದ ಈಗಾಗಲೇ ಅತೃಪ್ತಿಗೊಂಡ ಜನ, ಪ್ಲೇಗ್ ಇದೆಯೇ ಎಂದು ಮನೆಗಳನ್ನು ಶೋಧಿಸಲು ಸರಕಾರ ಬ್ರಿಟಿಷ್ ಸೈನಿಕರನ್ನು ಕಳುಹಿಸಿದಾಗ ಇನ್ನಷ್ಟು ಅತೃಪ್ತಿಗೊಂಡಿತು. ಭಾರತೀಯರ ರೀತಿ - ನೀತಿಗಳನ್ನು ತಿಳಿಯದ ಈ ಸೈನಿಕರು ಜನರೊಡನೆ ಅಯೋಗ್ಯ ರೀತಿಯಿಂದ ವರ್ತಿಸುತ್ತಿದ್ದರು ಅವರ ಶೋಧನಕಾರ್ಯ ಜನರಲ್ಲಿ ಭೀತಿಯನ್ನು ಹುಟ್ಟಿಸಿತ್ತು. ತಿಲಕರು ಇದನ್ನು ಬಲವಾಗಿ ಟೀಕಿಸಿದರು. ಬ್ರಿಟಿಷ್ ಸೈನಿಕರು ಯುದ್ಧರಂಗದಲ್ಲಿ ಎಷ್ಟೇ ಪ್ರಯೋಜನಕ್ಕೆ ಬೀಳಲಿ, ಇಂತಹ ಕೆಲಸಗಳಿಗೆ ಅವರು ಹೇಳಿದವರಲ್ಲ ಎಂದು ಅವರು ಸರಕಾರಕ್ಕೆ ತಿಳಿಸಿದರು. ಆದರೆ ರ್‍ಯಾಂಡ್‌ರಂತಹ ತಲೆಭಾರದ ವ್ಯಕ್ತಿಗಳು ಯಾರ ಸಲಹೆಯನ್ನೂ ಕೇಳುವ ಸ್ಥಿತಿಯಲ್ಲಿರಲಿಲ್ಲ.

ನೌಕರಶಾಹಿಯ ಅತ್ಯಾಚಾರ – ಅನಾಚಾರಗಳಿಂದ ರೊಚ್ಚಿಗೆದ್ದ ತರುಣರನೇಕರು ಈಗಾಗಲೇ ಹಿಂಸೆಯಿಂದ ಸರಕಾರವನ್ನುರುಳಿಸುವ ಉದ್ದೇಶದಿಂದ ಸಂಘಟಿತರಾಗುತ್ತಿದ್ದರು. ಅಂತಹ ತರುಣರಲ್ಲಿ ದಾಮೋದರ ಚಾಪೇಕರ್ ಎಂಬಾತ ಒಬ್ಬ. ಪ್ಲೇಗ್ ಆಡಳಿತದಿಂದ ಕುಪ್ರಸಿದ್ಧರಾಗಿದ್ದ ರ್‍ಯಾಂಡ್ ಸಾಹೇಬರ ಮೇಲೆ ಜನರ ಸೇಡು ಇತ್ತು. ಚಾಪೇಕರ್ ಗೋಲಿಯ ಮೂಲಕ ಅದನ್ನು ತೀರಿಸಲು ನಿರ್ಧರಿಸಿದ.

ಜನ ಬರಗಾಲ ಮತ್ತು ಪ್ಲೇಗಿನ ಹಾವಳಿಯಿಂದ ನರಳುತ್ತಿದ್ದರೂ ಬ್ರಿಟಿಷ್ ಅಧಿಕಾರಿಗಳು ವಿಕ್ಟೋರಿಯಾ ಮಹಾರಾಣಿಯವರ ಪಟ್ಟಾಭಿಷೇಕದ ವಜ್ರಮಹೋತ್ಸವವನ್ನು 1897 ರಲ್ಲಿ ವಿಜೃಂಭಣೆಯಿಂದ

ಆಚರಿಸಿದರು. ಚಾಪೇಕರ್ ಅದೇ ದಿನವನ್ನು ತನ್ನ ಸಾಹಸ ಕಾರ್ಯಕ್ಕಾಗಿ ಆರಿಸಿದ. ಸರಕಾರಿ ಭವನದಲ್ಲಿ ಉತ್ಸವವನ್ನು ತೀರಿಸಿಕೊಂಡು ರ್ಯಾಂಡ್ ಸಾಹೇಬರು ಹಿಂದಿರುಗುತ್ತಿದ್ದರು. ಅವರೊಡನೆ ಲೆಫ್ಟಿನೆಂಟ್ ಆಯರೆಸ್ಟ್ ಎಂಬವರೂ ಇದ್ದರು. ಚಾಪೇಕರ್ ರ್ಯಾಂಡ್ ಸಾಹೇಬರ ಮೇಲೆ ಗುರಿಯಿಟ್ಟು ಹೊಡೆದ. ಅವರು ಉರುಳಿಬಿದ್ದರು ದಾಮೋದರನೊಡನಿದ್ದ ಆತನ ಸೋದರನಿಗೆ ವಾಹನದೊಳಗಿಂದ ಬೊಬ್ಬೆ ಕೇಳಿಸಿತು. ತಮ್ಮ ಪತ್ತೆಹಚ್ಚುವುದೆಂದು ಊಹಿಸಿ ಆತ ಇನ್ನೊಂದು ಗುಂಡುಹೊಡೆದ. ಲೆಫ್ಟಿನೆಂಟ್ ಆಯರೆಸ್ಟ್ ಕೂಡ ಕೆಳಗೆ ಬಿದ್ದರು.

ಅನೇಕರ ದೃಷ್ಟಿಯಲ್ಲಿ ಚಾಪೇಕರ ಬಂಧುಗಳು ಕೊಲೆಗಡುಕರೆಂದಿದ್ದರೂ, ಅವರನ್ನು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರೆಂದು ತಿಳಿದವರು ಆಗಲೂ ಇದ್ದರು. ಮುಂದೆ ಅಭಿನವ ಭಾರತ ಸಮಾಜವೆಂಬ ಸಂಘಟನೆಯನ್ನು ಕಟ್ಟಿ, ದೇಶದ ಸ್ವಾತಂತ್ರ್ಯಕ್ಕಾಗಿ ಹಿಂಸಾತ್ಮಕ ಬಂಡಾಯ ಹೂಡಿದ ವೀರ ಸಾವರ್ಕರರು ಅಂಥವರಲ್ಲಿ ಒಬ್ಬರು. ದಾಮೋದರ ಚಾಪೇಕರನನ್ನು ಗಲ್ಲಿಗೇರಿಸಿದ ದಿನ ಸಾವರ್ಕರರು ತಮ್ಮ ಮನೆತನದ ದೇವತೆಯ ಮುಂದೆ, “ ಭಾರತದ ಸ್ವಾತಂತ್ರ್ಯವನ್ನು ಪುನಃ ಪಡೆಯುವುದಕ್ಕಾಗಿ ಸಶಸ್ತ್ರ ಬಂಡಾಯ ಹೂಡಿ ವೈರಿಯೊಡನೆ ಕೊನೆಯ ವರೆಗೂ ಹೋರಾಡುವ” ಪ್ರತಿಜ್ಞೆಯನ್ನು ಸ್ವೀಕರಿಸಿದರಂತೆ.

ರ್ಯಾಂಡ್ ಮತ್ತು ಆಯರೆಸ್ಟರ ಕೊಲೆ ಭಾರತದಲ್ಲಿದ್ದ ಬ್ರಿಟಿಷ್ ಜನರಲ್ಲಿ ಭೀತಿಯನ್ನು ಹುಟ್ಟಿಸಿತು. ಅವರ ಮುಖಂಡರು ಮತ್ತು ಅವರ ಒಡೆತನದಲ್ಲಿದ್ದ ಪತ್ರಿಕೆಗಳು ಪೂನದ ಮುಖಂಡರ ಮೇಲೆ ಉರಿದುಬಿದ್ದರು. ಪೂನದ ಮುಖಂಡರೆಂದರೆ ಯಾರು ? ಅವರ ದೃಷ್ಟಿಯಲ್ಲಿ ಬಾಲಗಂಗಾಧರ ತಿಲಕರೊಬ್ಬರೆ. ತಿಲಕರ ಲೇಖನಗಳಿಗೆ ಮತ್ತು ಕೊಲೆಗೆ ಸಂಬಂಧ ಕಲ್ಪಿಸಿ, ಅವರ ಕೆರಳಿಸುವ ಬರೆಹಗಳೇ ಕೊಲೆಗೆ ಕಾರಣ ಎಂಬಂತೆ ಅವರು ಆರೋಪಿಸಿದರು. ಈ ರೀತಿಯ ಆರೋಪ ಸರಕಾರದ ಮೇಲೆ ಪರಿಣಾಮ ಮಾಡದೆ ಬಿಡಲಿಲ್ಲ. ಪುನಃ ಪೂನದಲ್ಲಿ ‘ ಭಯೋತ್ಪಾದಕ ಆಡಳಿತ ’ ಪ್ರಾರಂಭವಾಯಿತು. ಅನೇಕ ಪತ್ರಿಕೆಗಳ ಸಂಪಾದಕರು – ಪ್ರಕಾಶಕರು ಬಂಧನಕ್ಕೊಳಗಾದರು. ತಿಲಕರು ‘ ಟೈಮ್ಸ್ ಆಫ್ ಇಂಡಿಯಾ ’ ಪತ್ರಿಕೆ ತಮ್ಮ ಮೇಲೆ ಮಾನಹಾನಿಕಾರಕ ಹೇಳಿಕೆಯನ್ನು ಪ್ರಕಟಿಸಿದ್ದಕ್ಕೆ ಅದರ

ಮೇಲೆ ಕ್ರಮ ಕೈಗೊಳ್ಳುವ ಬಗ್ಗೆ ಮುಂಬಯಿಗೆ ಹೋಗಿದ್ದರು. ಅಲ್ಲಿಯೇ ಅವರ ಬಂಧನವಾಯಿತು.

ತಿಲಕರ ಮೇಲೆ ರಾಜದ್ರೋಹದ ಆರೋಪ. ಶಿವಾಜಿ ಮರಾಠರನ್ನು ದ್ವೇಶಿಸಿ, ಎಚ್ಚತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡುವಂತೆ ಹುರಿದುಂಬಿಸುವ ಒಂದು ಕಾಲ್ಪನಿಕ ಕವಿತೆ, ಮತ್ತು ತಿಲಕರು ಶಿವಾಜಿ ಉತ್ಸವದಲ್ಲಿ ಅಫಜುಲ್ಲಾ ಖಾನನ ವಧೆಯನ್ನು ಸಮರ್ಥಿಸಿ ಮಾಡಿದ ಭಾಷಣದ ವರದಿ-ಇವು ಈ ಆರೋಪಕ್ಕೆ ಆಧಾರಗಳು. ಇವೆರಡೂ 'ಕೇಸರಿ' ಯಲ್ಲಿ ಪ್ರಕಟವಾಗಿದ್ದುವು. ನ್ಯಾಯಾಧೀಶರಲ್ಲಿ ಮತ್ತು ಜ್ಯೂರಿಗಳಲ್ಲಿ ಹೆಚ್ಚಿನವರು ಇಂಗ್ಲಿಷರೇ ಆಗಿರುವಾಗ ಇಂತಹ ಸಂದರ್ಭಗಳಲ್ಲಿ ಎಂತಹ ಆರೋಪಗಳೂ ಸತ್ಯವಾಗುತ್ತವೆ. ಈ ಖಟ್ಲೆಯಲ್ಲಿ ಒಂಭತ್ತು ಮಂದಿ ಜ್ಯೂರಿಗಳಲ್ಲಿ ಆರು ಮಂದಿ ಇಂಗ್ಲಿಷರಾಗಿದ್ದರು. ಈ ಆರೂ ಮಂದಿ ತಿಲಕರು ಅಪರಾಧಿಗಳು ಎಂದು ಅಭಿಪ್ರಾಯಪಟ್ಟರು. ನ್ಯಾಯಾಧೀಶರು ಬಹುಮಂದಿ ಜ್ಯೂರಿಗಳ ಅಭಿಪ್ರಾಯವನ್ನು ಒಪ್ಪಿ, ತಿಲಕರಿಗೆ ಹದಿನೆಂಟು ತಿಂಗಳುಗಳ ಕಠಿಣ ಸಜೆ ವಿಧಿಸಿದರು. ಪ್ರಿವೀ ಕೌನ್ಸಿಲಿಗೆ ಅಪೀಲು ಮಾಡಿಕೊಂಡರೂ ಯಾವ ಪ್ರಯೋಜನವೂ ಆಗಲಿಲ್ಲ. ತಿಲಕರು ಈಗಲೇ ಯೆರವಾಡಾ ಸೆರೆಮನೆಯಲ್ಲಿ ಶಿಕ್ಷೆಯನ್ನನುಭವಿಸುತ್ತಿದ್ದರು.

ತಿಲಕರು ಯಾವ ರೀತಿಯ ಶಿಕ್ಷೆಯನ್ನು ಎದುರಿಸಲೂ ಸಿದ್ಧರಾಗಿದ್ದರು. ದೇಶಕ್ಕಾಗಿ ಹೋರಾಡುವವರು ಇಂತಹ ಶಿಕ್ಷೆಗಳನ್ನು ಎದುರಿಸುವುದು ಅನಿವಾರ್ಯ ಎಂದು ಅವರು ಭಾವಿಸಿದ್ದರು. ಮೋತೀಲಾಲ್ ಘೋಷ್ ಎಂಬವರಿಗೆ ಬರೆದ ಪತ್ರವೊಂದರಲ್ಲಿ ಅವರು ಹೀಗೆಂದಿರುವರು: "ಜನತೆಯ ಮಧ್ಯೆ ನನ್ನ ಸ್ಥಾನ ಪೂರ್ಣವಾಗಿ ನನ್ನ ಚಾರಿತ್ರ್ಯವನ್ನು ಹೊಂದಿಕೊಂಡಿದೆ. ಆರೋಪಗಳಿಗೆ ನಾನು ಬಗ್ಗಿದೆನೆಂದರೆ ಮಹಾರಾಷ್ಟ್ರದಲ್ಲಿರುವುದೂ ಅಂಡಮಾನದಲ್ಲಿರುವುದೂ ಒಂದೆ. ಬ್ರಿಟಿಷ್ ಆಡಳಿತೆಯ ವಿರುದ್ಧ ಯಾವುದೇ ದುಷ್ಟ ಭಾವನೆಯನ್ನು ಬೆಳೆಸುವುದಕ್ಕೆ ನಾವು ಅಸಮರ್ಥರಾಗಿದ್ದೇವೆ. ಆದುದರಿಂದ ನಮ್ಮಲ್ಲಿ ಯಾರನ್ನೇ ಆಗಲಿ ರಾಜದ್ರೋಹದಂತಹ ಘೋರ ಆರೋಪದ ಮೇಲೆ ಶಿಕ್ಷಿಸುವುದು ಸಾಧ್ಯವಿಲ್ಲ. ಆದರೂ ಅಂತಹ ಅಪಾಯಗಳನ್ನು ನಾವು ಎದುರಿಸಬೇಕಾಗುವುದು ನಮ್ಮ ಉದ್ಯೋಗವನ್ನು ಹೊಂದಿಕೊಂಡಿರುವ ಅಪಾಯಗಳವು."

ಅಮರಾವತಿಯ ಕಾಂಗ್ರೆಸ್ ಅಧಿವೇಶನದಲ್ಲಿ ತಿಲಕರ ಬಿಡುಗಡೆಯ ಕುರಿತು ಮಂಡಿಸಿದ ಗೊತ್ತುವಳಿಯೇನೋ ಸ್ವೀಕೃತವಾಗಲಿಲ್ಲ. ಆದರೆ ಅಧಿವೇಶನದ ಅಧ್ಯಕ್ಷ ಶಂಕರನ್ ನಾಯರ್ ಸೆರೆಮನೆಯಲ್ಲಿ ದಿನಗಳೆಯು ತ್ತಿದ್ದ ತಿಲಕರಿಗೆ ಅಪೂರ್ವವಾದ ಗೌರವ ಸಲ್ಲಿಸಿದರು. "ತಿಲಕರ ಮೇಲೆ ಹೊರಿಸಿದ ಆರೋಪಗಳಲ್ಲಿ ಸತ್ಯವಿಲ್ಲ; ಅವರು ನಿರಪರಾಧಿಗಳು ಎಂದು ನಾವು ಮನಸಾ ನಂಬಿದ್ದೇವೆ ಎಂದು ನಾನು ನನ್ನ ಪರವಾಗಿ ಮತ್ತು ದೇಶೀಯ ಪತ್ರಿಕೆಗಳೆಲ್ಲವುಗಳ ಪರವಾಗಿ ಸಾರಿ ಹೇಳುತ್ತೇನೆ. ಅವರನ್ನು ಶಿಕ್ಷಿಸಿದುದರಿಂದ ತಾಂತ್ರಿಕವಾಗಿ ನ್ಯಾಯದ ಉದ್ದೇಶ ಪೂರ್ತಿಯಾಗಿರ ಬಹುದು; ಆದರೆ ವಾಸ್ತವವಾಗಿ ಅದರಿಂದ ನ್ಯಾಯಕ್ಕೆ ತುಂಬಾ ಆಘಾತ ವಾಗಿದೆ. ನನ್ನ ಸಹಾನುಭೂತಿ ಪೂರ್ಣ ತಿಲಕರ ಕಡೆಗಿದೆ. ಸೆರೆಮನೆ ಯಲ್ಲಿರುವ ಅವರಿಗಾಗಿ ದೇಶಕ್ಕೆ ದೇಶವೇ ಕಣ್ಣೀರು ಸುರಿಸುತ್ತದೆ......"

ಈ ಘಟನೆಯ ಬಗ್ಗೆ ಬರೆಯುತ್ತ ಡಾ| ಪಟ್ಟಾಭಿ ಸೀತಾರಾಮಯ್ಯ ನವರು, "ಇದರಿಂದ ತಿಲಕರ ಕೀರ್ತಿ ತುಟ್ಟತುದಿಗೇರಿತು. ಅದೇ ವರ್ಷ ಗೋಖಲೆಯವರ ಸುತ್ತ ಮೋಡ ಕವಿದಿದ್ದುದನ್ನು ಸ್ಮರಿಸಿಕೊಂಡರೆ ಇದು ಇನ್ನೂ ಸ್ಪಷ್ಟವಾಗುವುದು" ಎಂದಿದ್ದಾರೆ.

ಮಂದಗಾಮಿಗಳ ಗುಂಪಿಗೆ ಸೇರಿದ ಗೋಪಾಲಕೃಷ್ಣ ಗೋಖಲೆ ಯವರು ತಿಲಕರ ರಾಜಕೀಯ ವಿರೋಧಿಗಳು. ಅವರು ಅದೇ ವರ್ಷ ಇಂಗ್ಲಂಡಿಗೆ ಹೋಗಿದ್ದರು. ಇಂಗ್ಲಂಡಿನಲ್ಲಿದ್ದಾಗ ಅವರು, ಪ್ಲೇಗಿನ ಸಮಯದಲ್ಲಿ ಬ್ರಿಟಿಷ್ ಸೈನಿಕರು ನಡೆಸಿದ ಅತ್ಯಾಚಾರಗಳನ್ನು ಖಂಡಿಸಿ ಹೇಳಿಕೆಯಿತ್ತಿದ್ದರು. ಈ ಹೇಳಿಕೆಯನ್ನು ಸಮರ್ಥಿಸಲು ಅವರಿಂದ ಸಾಧ್ಯ ವಾಗದ ಕಾರಣ ಅವರು ಭಾರತಕ್ಕೆ ಹಿಂದಿರುಗಿದೊಡನೆಯೇ ಸರಕಾರದ ಕ್ಷಮೆ ಕೇಳಬೇಕಾಯಿತು. ಅವರು ಬ್ರಿಟಿಷ್ ಸೈನಿಕರ ಮೇಲೆ ಹೊರಿಸಿದ ಆರೋಪಗಳನ್ನಷ್ಟೇ ಅಲ್ಲದೆ, ಪ್ಲೇಗ್ ಆಡಳಿತದ ಕುರಿತು ಮಾಡಿದ ಎಲ್ಲ ಟೀಕೆಗಳನ್ನೂ ಹಿಂತೆಗೆದುಕೊಂಡರು. ಇದರಿಂದ ಅವರು ಸರಕಾರದ ಕೃಪೆ ಯನ್ನು ಗಳಿಸುವುದೇನೋ ಸಾಧ್ಯವಾಯಿತು. ಆದರೆ ಜನತೆಯ ದೃಷ್ಟಿ ಯಲ್ಲಿ, ವಿಚಾರಣೆಯನ್ನೆದುರಿಸಿ ಸೆರೆಮನೆಯಲ್ಲಿ ಶಿಕ್ಷೆಯನ್ನನುಭವಿಸುತ್ತಿದ್ದ ಲೋಕಮಾನ್ಯರೇ ಶ್ರೇಷ್ಠರಾಗಿದ್ದರು.

ಸೆರೆಮನೆಯಲ್ಲಿ ತಿಲಕರು ಕಷ್ಟದ ಕೆಲಸಗಳನ್ನು ಮಾಡಬೇಕಾಗು

ತ್ತಿತ್ತು. 'ಗೀತಾರಹಸ್ಯ', 'ಓರಿಯನ್' ಮೊದಲಾದ ಉತ್ಕೃಷ್ಟ ಗ್ರಂಥಗಳನ್ನು ರಚಿಸಿದ ಈ ಪ್ರಸಿದ್ಧ ವಿದ್ವಾಂಸ ಚಿತ್ತದಿಂದ ಕುರ್ಚಿಗಳನ್ನು ತಯಾರಿಸುವುದನ್ನೋ, ಗೋಡೆಗಳಿಗೆ ಬಣ್ಣ ಬಳಿಯುವುದನ್ನೋ ನೆನಸುವುದು ಕೂಡ ಸಾಧ್ಯವಿಲ್ಲ. ಆದರೆ ತಿಲಕರಿಗೆ ಎಲ್ಲ ಕೆಲಸಗಳೂ ಸಮಾನವಾಗಿದ್ದುವು. ವೇದಗಳನ್ನು ಓದಿದಷ್ಟೇ ಸಮಾಧಾನ-ಸಂತೋಷಗಳಿಂದ ಅವರು ಕುರ್ಚಿಗಳನ್ನು ಹೆಣೆಯುತ್ತಿದ್ದರು. ಬಣ್ಣಗಳ ಮಿಶ್ರಣದಲ್ಲಿ ಅವರು ಮಾಡಿದ ಸುಧಾರಣೆಗಳನ್ನು ನೋಡಿ ಒಮ್ಮೆ ಸೆರೆಮನೆಯ ಅಧಿಕಾರಿಗೇ ಆಶ್ಚರ್ಯವಾಗಿತ್ತಂತೆ.

ಇಷ್ಟೆಲ್ಲ ಕೆಲಸಗಳ ನಡುವೆಯೂ ಅವರು ಸೆರೆಮನೆಯಲ್ಲಿ ವೇದಗಳ ಅಭ್ಯಾಸನ್ನು ಮುಂದುವರಿಸಿದ್ದರು. ಸೆರೆಮನೆಯ ಕಷ್ಟಗಳನ್ನು ವೇದಗಳ ಓದಿನಲ್ಲಿ ಮರೆಯುತ್ತಿದ್ದರು. ಅವರ ಸೂಕ್ಷ್ಮ ಬುದ್ಧಿಗೆ ವೈದಿಕ ಶ್ಲೋಕಗಳಿಗೆ ಹೊಸ ಅರ್ಥ ಹೊಳೆದಾಗ ಅವರ ಸಂತೋಷಕ್ಕೆ ಮೇರೆಯಿರುತ್ತಿರಲಿಲ್ಲ. ಮನುಷ್ಯನ ಭೌತಿಕ ಶರೀರವನ್ನು ಬಂಧಿಸಬಹುದು. ಆದರೆ ಆತನ ವಿಚಾರಶಕ್ತಿಯನ್ನು ಬಂಧನದಲ್ಲಿಡುವುದು ಸಾಧ್ಯವಿದೆಯೆ?

ಲೋಕಮಾನ್ಯರಿಗೆ ಆದ ಸೆರೆಮನೆ ವಾಸ ದೇಶವಿದೇಶಗಳ ವಿದ್ವಾಂಸರ ಗಮನವನ್ನು ಸೆಳೆದಿತ್ತು. ಅಂಥವರಲ್ಲಿ ಪ್ರೊ| ಮ್ಯಾಕ್ಸ್‌ಮುಲ್ಲರ್ ಒಬ್ಬರು. ಅವರು ತಿಲಕರ ಬಿಡುಗಡೆಗಾಗಿ ಇಂಗ್ಲೆಂಡಿನಲ್ಲಿ ಬಹಳ ಪ್ರಯತ್ನಿಸಿದರು. ಅನೇಕ ಪ್ರಸಿದ್ಧ ವ್ಯಕ್ತಿಗಳು ಸಹಿಮಾಡಿದ ಮನವಿಯೊಂದನ್ನು ವಿಕ್ಟೋರಿಯಾ ಮಹಾರಾಣಿಯವರಿಗೆ ಒಪ್ಪಿಸಿದರು ಈ ಪ್ರಯತ್ನ ಸಾಕಷ್ಟು ಫಲಕೊಡದೆ ಉಳಿಯಲಿಲ್ಲ. ನಿಶ್ಚಿತ ಅವಧಿಯ ಆರು ತಿಂಗಳುಗಳ ಮೊದಲೇ ತಿಲಕರ ಬಿಡುಗಡೆಯಾಯಿತು.

ತಮ್ಮ ಪ್ರೀತಿಯ ಮುಖಂಡ ಹೊರಬಂದುದನ್ನು ಕಂಡು ದೇಶಕ್ಕೆ ದೇಶವೇ ಆನಂದಿಸಿತು.

೬

# ರಾಜಕೀಯ ಹೋರಾಟ

ಸಮಾಜಸುಧಾರಣೆಯ ವಿಷಯದಲ್ಲಿ ಉಂಟಾದ ವಿವಾದವೇ ಬೆಳೆದು ಮುಂದೆ ಕಾಂಗ್ರೆಸಿನಲ್ಲಿ ಮಂದಗಾಮಿ ಮತ್ತು ತೀವ್ರಗಾಮಿ ಪಕ್ಷಗಳು ಹುಟ್ಟಿಕೊಂಡುದನ್ನು ಕಂಡಿದ್ದೇವೆ. ಸುಧಾರಣಾರಂಗದಲ್ಲಿ ಮಂದಗಾಮಿಗಳಾಗಿದ್ದ ಬಾಲಗಂಗಾಧರ ತಿಲಕರು ಮತ್ತು ಅವರ ಅನುಯಾಯಿಗಳು ರಾಜಕೀಯರಂಗದಲ್ಲಿ ತೀವ್ರಗಾಮಿಗಳು! ಸುಧಾರಣಾರಂಗದಲ್ಲಿ ತೀವ್ರಗಾಮಿಗಳಾಗಿದ್ದ ಗೋಖಲೆ ಮತ್ತು ಅವರ ಅನುಯಾಯಿಗಳು ರಾಜಕೀಯರಂಗದಲ್ಲಿ ಮಂದಗಾಮಿಗಳು! 1915 ರಲ್ಲಿ ಗೋಖಲೆಯವರ ನಿಧನದ ವರೆಗೂ ಮಂದಗಾಮಿಗಳೇ ಕಾಂಗ್ರೆಸಿನಲ್ಲಿ ಪ್ರಬಲರಾಗಿದ್ದರು. ತಿಲಕರ ರಾಷ್ಟ್ರೀಯವಾದಿ ಪಕ್ಷ ಕಾಂಗ್ರೆಸಿನೊಳಗೇ ಇದ್ದು ಒಂದೆಡೆಯಿಂದ ಮಂದಗಾಮಿಗಳೊಡನೆ, ಇನ್ನೊಂದೆಡೆಯಿಂದ ಸರಕಾರದೊಡನೆ ಹೋರಾಟ ಮುಂದುವರಿಸಿತು. 1907 ರಲ್ಲಿ ಸೂರತ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಎರಡು ಗುಂಪುಗಳೊಳಗೆ ತೀವ್ರ ಮತಭೇದ ಬಂದು ತಿಲಕರು ತಮ್ಮ ಸಂಗಡಿಗರೊಡನೆ ಕಾಂಗ್ರೆಸಿನಿಂದ ಹೊರ ಉಳಿಯಬೇಕಾಯಿತು. 1916 ರ ವರೆಗೂ ಅವರು ಬೇರೆಯಾಗಿಯೇ ಇದ್ದರು.

ತಿಲಕರು ಕಾಂಗ್ರೆಸ್ ಸೇರಿದುದು 1889 ರಲ್ಲಿ. ಕಾಂಗ್ರೆಸಿನ ಅಂದಿನ ಮುಖಂಡರಾದ ಸುಧಾರಣಾವಾದಿಗಳೊಡನೆ ಸಮಾಜಸುಧಾರಣೆಯ ವಿಷಯದಲ್ಲಿ ಅವರಿಗೆ ತೀವ್ರ ಮತಭೇದವಿದ್ದರೂ ಕಾಂಗ್ರೆಸಿನ ಕರೆಬಂದಾಗಲೆಲ್ಲ ಅವರು ಎಲ್ಲವನ್ನೂ ಮರೆತು ಸಂಸ್ಥೆಗಾಗಿ ದುಡಿಯುತ್ತಿದ್ದರು. ರಾಜಕೀಯ ಮತ್ತು ಸಮಾಜಸುಧಾರಣೆ– ಇವುಗಳನ್ನು ಗಂಟುಹಾಕಬಾರದೆಂಬುದು ಮೊದಲಿನಿಂದಲೂ ಅವರ ಅಭಿಪ್ರಾಯ. ಕಾಂಗ್ರೆಸ್ ಅಧಿವೇಶನದೊಡನೆ ಸಾಮಾಜಿಕ ಪರಿಷತ್ತು ಜರಗುವುದಕ್ಕೆ ಅವರ ವಿರೋಧವಿದ್ದುದೂ ಇದಕ್ಕಾಗಿಯೆ.

ಮಹಾರಾಷ್ಟ್ರದಲ್ಲಿ ಕಾಂಗ್ರೆಸನ್ನು ನಿಜವಾಗಿ ಜನತೆಯ ಕಾಂಗ್ರೆಸಾಗಿ ಮಾಡಿದ ಶ್ರೇಯಸ್ಸು ಪೂರ್ಣ ತಿಲಕರಿಗೇ ಸಲ್ಲುತ್ತದೆ.

ಶಿವಾಜಿ ಮತ್ತು ಗಣೇಶ ಉತ್ಸವಗಳು ಮಹಾರಾಷ್ಟ್ರದ ಸಾಮಾಜಿಕ ಜೀವನಕ್ಕೆ ಅವರು ಕೊಟ್ಟ ಎರಡು ಕಾಣಿಕೆಗಳು. ಗಣೇಶೋತ್ಸವವು 1893 ರಲ್ಲಿಯೂ ಶಿವಾಜಿ ಉತ್ಸವವು 1895 ರಲ್ಲಿಯೂ ಪ್ರಾರಂಭಿಸಲ್ಪಟ್ಟವು. ಇವುಗಳು ಜನತೆಯಲ್ಲಿಯ ಧಾರ್ಮಿಕ ಭಾವನೆಯನ್ನು ಮತ್ತು ರಾಷ್ಟ್ರೀಯ ಮನೋವೃತ್ತಿಯನ್ನು ಕೆರಳಿಸಿ, ತಾವೊಂದು ಜನಾಂಗ ಎಂಬುದರ ಅರಿವು ಮಾಡಿಕೊಟ್ಟವು; ಮೇಲು-ಕೀಳೆನ್ನದೆ, ಬಡವ-ಬಲ್ಲಿದನೆನ್ನದೆ, ಪಂಡಿತ-ಪಾಮರರೆನ್ನದೆ ಎಲ್ಲರಿಗೂ ಒಂದುಗೂಡುವ ರಂಗವಾಗಿ ಜನತೆಯಲ್ಲಿ ಸಂಘಟನೆಯನ್ನುಂಟುಮಾಡಿದುವು. ತಿಲಕರು ಮರೆಯಾದರೂ ಅವರು ಪ್ರಾರಂಭಿಸಿದ ಈ ಉತ್ಸವಗಳು ಮಹಾರಾಷ್ಟ್ರದ ಮೂಲೆ ಮೂಲೆಗಳಲ್ಲಿ ಇಂದಿಗೂ ಸಾರ್ವಜನಿಕ ಉತ್ಸವಗಳಾಗಿ ಆಚರಿಸಲ್ಪಡುತ್ತವೆ.

ಹೊರಗಿನಿಂದ ನೋಡುವಾಗ ಈ ಉತ್ಸವಗಳಿಗೂ ರಾಜಕೀಯಕ್ಕೂ ಸಂಬಂಧ ಕಾಣದಾದರೂ ಇಂಗ್ಲಿಷ್ ಆಳರಸರು ಅವುಗಳ ಹಿಂದೆ ಅಡಗಿದ್ದ ರಾಜಕೀಯ ಶಕ್ತಿಯನ್ನು ಕಂಡುಕೊಳ್ಳದೆ ಇರಲಿಲ್ಲ. ಅವರು ಅವುಗಳನ್ನು ಕಡೆಗಣ್ಣಿನಿಂದಲೇ ನೋಡಿದರು; ಉತ್ಸವಗಳ ಹೆಸರಲ್ಲಿ ಜನರು ಸಂಘಟಿತರಾಗುತ್ತಿದ್ದುದನ್ನು ಕಂಡು ಬೆಚ್ಚಿಬಿದ್ದರು. ಜನರ ಉತ್ಸಾಹಕ್ಕೆ ತಣ್ಣೀರೆರೆಯಲು ಸಾಧ್ಯವಿದ್ದ ಪ್ರಯತ್ನಗಳನ್ನೂ ಮಾಡಿದರು. 1897 ರಲ್ಲಿ ತಿಲಕರ ಮೇಲೆ ಹೊರಿಸಿದ ರಾಜದ್ರೋಹದ ಆರೋಪ ಅಂತಹ ಪ್ರಯತ್ನಗಳಲ್ಲೊಂದು. ಆದರೆ ಆಗಲೇ ಸಂಘಟಿತವಾಗುತ್ತಿದ್ದ ಮರಾಠಿ ಜನತೆ ಇಂತಹ ಬೆದರಿಕೆ-ದರ್ಪಗಳಿಗೆಲ್ಲ ಹೆದರುವಂತಿರಲಿಲ್ಲ.

ಮಂದಗಾಮಿಗಳ ಮುಖಂಡತ್ವದಲ್ಲಿ ಮಂದಗಮನದಿಂದಲೇ ಸಾಗುತ್ತಿದ್ದ ಕಾಂಗ್ರೆಸ್ ಸಂಸ್ಥೆಗೆ ಹೊಸ ಶಕ್ತಿಯನ್ನು ಕೊಡಲು ತಿಲಕರು 1896 ರಿಂದಲೂ ಪ್ರಯತ್ನಿಸುತ್ತಿದ್ದರು. ಕಾಂಗ್ರೆಸಿನ ಆಗಿನ ಅಧಿಪತಿಗಳಿಗೆ ಬ್ರಿಟಿಷ್ ಪ್ರಭುತ್ವದ ಮೇಲೆ ಇನ್ನೂ ವಿಶ್ವಾಸವಿತ್ತು. ಸರಕಾರದಲ್ಲಿ ದೊಡ್ಡ ದೊಡ್ಡ ಹುದ್ದೆಗಳಲ್ಲಿದ್ದು ನಿವೃತ್ತರಾದ ಅವರು ನೌಕರಶಾಹಿಯ ವಿರೋಧವನ್ನು ಕಟ್ಟಿಕೊಳ್ಳುವುದಕ್ಕೆ ಸಿದ್ಧರಿರಲಿಲ್ಲ. ಅಂಥವರಿಗೆ ತಿಲಕರ ಧೋರಣೆ ಅಪ್ರಾಸಂಗಿಕವೂ ಅನುಚಿತವೂ ಆಗಿ ಕಂಡುದರಲ್ಲಿ ಆಶ್ಚರ್ಯ

ವಿಲ್ಲ. ಲಕ್ನೋದಲ್ಲಿ 1899ರಲ್ಲಿ ಜರಗಿದ ಕಾಂಗ್ರೆಸ್ ಅಧಿವೇಶನದಲ್ಲಿ ತಿಲಕರು ಲಾರ್ಡ್ ಸ್ಯಾಂಧರ್ಸ್ಟ್‌ರ ಆಳಿಕೆಯನ್ನು ಖಂಡಿಸಿ ಗೊತ್ತುವಳಿಯನ್ನು ತಂದಾಗ ಇವರು ದೊಡ್ಡ ಕೋಲಾಹಲವನ್ನೇ ಎಬ್ಬಿಸಿದರು. ಮುಂಬಯಿಯ ಗವರ್ನರರಾಗಿದ್ದ ಲಾರ್ಡ್ ಸ್ಯಾಂಧರ್ಸ್ಟ್‌ರ ಆಳಿಕೆ ದೇಶದಲ್ಲೇ ಕುಪ್ರಸಿದ್ಧವಾಗಿತ್ತು. ತಿಲಕರು ಅವರ ದುರಾಡಳಿತೆಗೆ ಒಂದೊಂದಾಗಿ ನಿದರ್ಶನಗಳನ್ನು ಕೊಟ್ಟು, ಅವರ ಅಧಿಕಾರಾವಧಿ ಮುಂಬಯಿಯ ಜನತೆಗೆ ವಿನಾಶಕಾರಿಯಾಗಿದ್ದಿಲ್ಲವೆಂಬುದನ್ನು ಸಿದ್ಧಗೊಳಿಸಲು ಅಧಿವೇಶನದ ಪ್ರತಿನಿಧಿಗಳಿಗೆ ಆಹ್ವಾನವಿತ್ತರು. ಆದರೆ ಅವರ ಆಹ್ವಾನವನ್ನೆದುರಿಸುವ ಸಾಹಸವನ್ನು ಒಬ್ಬನೇ ಒಬ್ಬ ಪ್ರತಿನಿಧಿ ಮಾಡಲಿಲ್ಲ. ತಿಲಕರ ಗೊತ್ತುವಳಿಯನ್ನು ಸ್ವೀಕರಿಸುವಂತೆಯೂ ಇಲ್ಲ. ಸ್ಯಾಂಧರ್ಸ್ಟ್‌ರಿಗೆ ಸ್ಮಾರಕವನ್ನು ರಚಿಸುವುದರಲ್ಲಿ ಅಗ್ರಪಾತ್ರವಹಿಸಿದ್ದ ಮುಂಬಯಿಯ ಮಂದಗಾಮಿ ಮುಖಂಡರು ಆ ಗೊತ್ತುವಳಿಯನ್ನು ಹೇಗೆ ಸ್ವೀಕರಿಸಿಯಾರು! ಅಧಿವೇಶನದ ಅಧ್ಯಕ್ಷರಾಗಿದ್ದ ಆರ್. ಸಿ. ದತ್ತರು, ರಾಷ್ಟ್ರೀಯವಾದಿಗಳು (ತೀವ್ರಗಾಮಿಗಳು) ಗೊತ್ತುವಳಿಯನ್ನು ಒತ್ತಾಯಿಸಿದರೆ ತಾವು ರಾಜಿನಾಮೆ ಕೊಡುವುದಾಗಿ ಬೆದರಿಕೆ ಹಾಕಿದರು. ತಿಲಕರು ಅಧಿವೇಶನದ ಯಶಸ್ವಿಯ ದೃಷ್ಟಿಯಿಂದ ಗೊತ್ತುವಳಿಯನ್ನು ಹಿಂತೆಗೆದುಕೊಳ್ಳಬೇಕಾಯಿತು.

ಮರುವರ್ಷ ಸತಾರದಲ್ಲಿ ಜರಗಿದ ಪ್ರಾಂತೀಯ ಪರಿಷತ್ತಿನಲ್ಲಿಯೂ ತಿಲಕರು ಇದೇ ಅಭಿಪ್ರಾಯದ ಗೊತ್ತುವಳಿಯನ್ನು ಮಂಡಿಸುವ ಸೂಚನೆ ಕೊಟ್ಟರು. ಅಲ್ಲಿಯೂ ಅಧ್ಯಕ್ಷರು ರಾಜಿನಾಮೆಯ ಬೆದರಿಕೆ ಹಾಕಿ ಗೊತ್ತುವಳಿಯನ್ನಡಗಿಸಲು ಪ್ರಯತ್ನಿಸಿದರು. ಆದರೆ ಪರಿಷತ್ತಿಗೆ ಬಂದ ಪ್ರತಿನಿಧಿಗಳಲ್ಲಿ ಹೆಚ್ಚಿನವರು ತಿಲಕರ ಬೆಂಬಲಿಗರಾಗಿದ್ದುದರಿಂದ ಅವರ ಆ ಪ್ರಯತ್ನ ಪೂರ್ಣವಾಗಿ ಸಫಲವಾಗಲಿಲ್ಲ. ಕೊನೆಗೆ ಎರಡು ಪಕ್ಷಗಳೊಳಗೆ ಒಪ್ಪಂದವಾಗಿ, ಗೊತ್ತುವಳಿಯನ್ನು ಔಪಚಾರಿಕವಾಗಿ ಮಂಡಿಸದಿದ್ದರೂ ಅದನ್ನು ಪರಿಷತ್ತಿನ ಕಾರ್ಯಕಲಾಪಗಳ ವರದಿಯಲ್ಲಿ ಸೇರಿಸಲಾಯಿತು. ಇದು ತಿಲಕರ ದೊಡ್ಡ ವಿಜಯವೆಂದೇ ಹೇಳಬಹುದು.

ಉದಾರವಾದಿ (ಮಂದಗಾಮಿ) ಪಕ್ಷದೊಡನೆ ಸೆಣಸಾಡುವುದು ತಿಲಕರಿಗೆ ಅಷ್ಟೇನೂ ಸುಲಭವಿರಲಿಲ್ಲ. ಅದರ ಮುಖಂಡರು ಪ್ರಭಾವಶಾಲಿಗಳಾಗಿದ್ದರು; ಅನುಭವಿಗಳಾದ ವಿದ್ವಾಂಸರೂ ಅನೇಕ ವರ್ಷಗಳ ಸೇವೆಯಿಂದ

ಕೀರ್ತಿಪಡೆದ ಮಹಾನುಭಾವರೂ ಆಗಿದ್ದರು. ಜನಬಲ, ಧನಬಲವೂ ಅವರಿಗೆ ಸಾಕಷ್ಟು ಇತ್ತು. ದೇಶದ ಹೆಚ್ಚಿನ ರಾಷ್ಟ್ರೀಯ ಸಂಸ್ಥೆಗಳು ಅವರ ಅಧೀನ ಇದ್ದುವು. ಅವೆಲ್ಲವುಗಳಿಗೆ ವಿರುದ್ಧವಾಗಿ ಹೋರಾಡುವು ದೆಂದರೆ ಪ್ರವಾಹಕ್ಕೆ ಇದಿರಾಗಿ ಹೋದಂತೆ ಅದು ತಿಲಕರಿಗೂ ಗೊತ್ತಿ ಲ್ಲದ ಸಂಗತಿಯಾಗಿರಲಿಲ್ಲ.

ಈ ಶತಮಾನದ ಮೊದಲನೆಯ ಐದು ವರ್ಷಗಳು ಭಾರತದ ಇತಿ ಹಾಸದಲ್ಲಿ ಒಂದು ಸಂಧಿಕಾಲ. ವೈಸರಾಯ್ ಲಾರ್ಡ್ ಕರ್ಝನರ ಅಧಿ ಕಾರಾವಧಿಯ ಕಾಲ ಅದು. ಕರ್ಝನರಿಗೆ ಭಾರತೀಯರೆಂದರೆ ಒಂದು ರೀತಿಯ ತಿರಸ್ಕಾರ. ಭಾರತೀಯರು ಅನಾಗರಿಕರೂ ಅಸತ್ಯವಾದಿಗಳೂ ಎಂಬ ಭಾವನೆ ಅವರಲ್ಲಿ. ಅವರ ಪ್ರತಿಗಾಮಿ ನೀತಿ ಆಗಲೇ ಜನರಲ್ಲಿ ಅಸಂತೃಪ್ತಿ-ಅಸಮಾಧಾನಗಳನ್ನು ಹೆಚ್ಚಿಸಿತ್ತು. ಸಾಲದೆಂಬಂತೆ ಅವರು ಬಂಗಾಳವನ್ನು ವಿಭಜಿಸಿ ಮಲಗಿದ್ದ ಹುಲಿಯನ್ನು ಎಬ್ಬಿಸಿದರು.

ಒಂದಾಗಿದ್ದ ಬಂಗಾಳ ಪ್ರಾಂತವನ್ನು ವಿಭಜಿಸಿ ಎರಡಾಗಿ ಮಾಡಿ ದುದು ಬಹುಸಂಖ್ಯಾಕ ಬಂಗಾಳಿ ಜನರ ಇಚ್ಛೆಗೆ ವಿರುದ್ಧವಾಗಿತ್ತು. ಕರ್ಝನರು ಕೊಟ್ಟ ಕಹಿ ಗುಳಿಗೆಯನ್ನು ನುಂಗಿ ಅವರು ಸುಮ್ಮನೆ ಕುಳಿತು ಕೊಳ್ಳಲಿಲ್ಲ. ಅವರ ಸರ್ವಾಧಿಕಾರಿ ನೀತಿಯನ್ನು ಸರ್ವಬಲದಿಂದಲೂ ವಿರೋಧಿಸಿದರು. ಸಭೆ-ಮೆರವಣಿಗೆಗಳಾದುವು; ಪ್ರತಿಭಟನೆಯ ಪ್ರದರ್ಶನಗಳಾದುವು. ಹರತಾಳಗಳು ಆಚರಿಸಲ್ಪಟ್ಟುವು. ವಿದ್ಯಾರ್ಥಿ ಗಳು ಶಾಲೆಗಳನ್ನು ಬಿಟ್ಟು ಹೊರನಡೆದರು. ಸಾಮ್ರಾಜ್ಯಶಾಹಿ ಸರಕಾರ ಇದನ್ನೆಲ್ಲ ಮೆಚ್ಚುವಂತಿಲ್ಲ. ಜನತೆಯ ಚಳವಳವನ್ನು ಉಕ್ಕಿನ ಕೈಯಿಂ ದಲೇ ಹತ್ತಿಕ್ಕಲು ಪ್ರಯತ್ನಿಸಿತು. ಪೂರ್ವಬಂಗಾಲದ ಲೆಫ್ಟಿನೆಂಟ್ ಗವರ್ನರ್ ಫುಲ್ಲರ್ ಸಾಹೇಬರು, "ರಕ್ತಪಾತದ ಅವಶ್ಯ ಬಿದ್ದೀತು" ಎಂದು ಬೆದರಿಕೆ ಹಾಕಿದರು; ಬೆದರಿಕೆಯನ್ನು ಕಾರ್ಯರೂಪದಲ್ಲಿ ತರಲು ಗೂರ್ಖಾ ಸೈನಿಕರನ್ನೂ ಕರೆದರು

ಆದರೆ ಮರ್ದನ-ದಬ್ಬಾಳಿಕೆಗಳಿಂದ ಜನತೆಯ ಚಳವಳವನ್ನು ಹತ್ತಿಕ್ಕುವುದು ಸಾಧ್ಯವಿಲ್ಲ. ಸರಕಾರದ ದಬ್ಬಾಳಿಕೆ ಹೆಚ್ಚಿದಂತೆ ಚಳವಳ ಬೆಳೆಯುತ್ತದೆ; ಜನತೆಯ ಶಕ್ತಿ ಹೆಚ್ಚುತ್ತದೆ.

ಬಂಗಾಳದ ವಿಭಜನೆ ಕೇವಲ ಬಂಗಾಳಿಗಳಿಗೆ ಸಂಬಂಧಿಸಿದ ಪ್ರಶ್ನೆ ಯಾಗಿ ಉಳಿಯಲಿಲ್ಲ. ತಮ್ಮ ಸೋದರರಿಗಾದ ಅನ್ಯಾಯವನ್ನು ಭಾರತದ

ಇತರ ಭಾಗಗಳ ಜನರು ತಮಗಾದ ಅನ್ಯಾಯವೆಂದೇ ತಿಳಿದರು. ಚಳವಳ ಬಂಗಾಳದ ಗಡಿಯನ್ನು ದಾಟಿ ಇತರೆಡೆಗಳಿಗೂ ಹಬ್ಬಿತು. ಬಂಗಾಳದಲ್ಲಿ ಬಿಪಿನ ಚಂದ್ರಪಾಲ್, ಪಂಜಾಬಿನಲ್ಲಿ ಲಾಲಾ ಲಜಪತ ರೈ, ಮಹಾರಾಷ್ಟ್ರದಲ್ಲಿ ಬಾಲಗಂಗಾಧರ ತಿಲಕರು ಚಳವಳದಲ್ಲಿ ಧುಮುಕಿದರು.

ಅಖಿಲ ಭಾರತ ಸ್ವರೂಪದ ಮೊದಲನೆಯ ರಾಷ್ಟ್ರೀಯ ಚಳವಳ ಇದು. ಇಂತಹ ಸಾಮೂಹಿಕ ಚಳವಳವನ್ನು ಸಾಗಿಸಿಕೊಂಡು ಹೋಗಲು ಪ್ರಬಲ ಸಂಘಟನಾಶಕ್ತಿಯುಳ್ಳ ಪ್ರಭಾವಿ ಮುಖಂಡರು ಬೇಕು. ಮಹಾರಾಷ್ಟ್ರದಲ್ಲಿ ಜನಸಾಮಾನ್ಯರನ್ನು ಕೂಡ ಸಂಘಟಿಸಿ ರಾಷ್ಟ್ರೀಯತೆಯ ಧ್ವಜವನ್ನು ಎತ್ತಿಹಿಡಿದ ತಿಲಕರೇ ಅದಕ್ಕೆ ಯೋಗ್ಯರು ಅರವಿಂದ ಘೋಷ, ಬಿಪಿನ ಚಂದ್ರಪಾಲ, ಲಾಲಾ ಲಜಪತ ರೈ ಮೊದಲಾದ ರಾಷ್ಟ್ರೀಯವಾದಿ ಮುಖಂಡರಿಗೂ ಅವರ ಮೇಲೆ ಅಚಲ ವಿಶ್ವಾಸವಿತ್ತು. ಅವರೆಲ್ಲ ಈ ಭಾರವನ್ನು ತಿಲಕರ ಮೇಲೆಯೇ ಹೊರಿಸಿದರು.

ಮಹಾರಾಷ್ಟ್ರದ ಮುಖಂಡರಾಗಿದ್ದ ತಿಲಕರು ಈಗ ಅಖಿಲ ಭಾರತ ಧುರೀಣರಾಗಿ ನೌಕರಶಾಹಿಯ ವಿರುದ್ಧ ಹೋರಾಟಕ್ಕೆ ಅಣಿಯಾದರು.

ಸ್ವದೇಶಿ, ವಿದೇಶೀ ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ — ಇವು ಬ್ರಿಟಿಷ್ ಪ್ರಭುತ್ವದ ವಿರುದ್ಧ ಅಸ್ತ್ರಗಳು. ವಿದೇಶೀಯ ವಸ್ತುಗಳು ಬಹಿಷ್ಕರಿಸಲ್ಪಟ್ಟುವು. ಸ್ವದೇಶೀ ಉಪಯೋಗ ಬೆಳೆಯಿತು. ರಾಷ್ಟ್ರೀಯ ಶಿಕ್ಷಣ ಕೇಂದ್ರಗಳು ಸ್ಥಾಪಿತವಾದುವು. ಜೀವನ, ಶಿಕ್ಷಣ, ಕಲೆ, ವಿಜ್ಞಾನ, ಸಾಹಿತ್ಯ — ಎಲ್ಲಿ ನೋಡಿದರೂ ಸ್ವದೇಶೀ ಪ್ರಭಾವ. ಆರ್ಥಿಕ ಅಥವಾ ರಾಜಕೀಯ ಅಸ್ತ್ರವಾಗಿ ಪ್ರಾರಂಭವಾದ ಸ್ವದೇಶೀ ಚಳವಳ ರಾಷ್ಟ್ರದ ಪುನರೋದಯದ ಚಳವಳವಾಗಿ ಪರಿಣಮಿಸಿತು. ದೇಶ ಎಚ್ಚತ್ತಿತ್ತು; ಎಚ್ಚತ್ತ ಜನತೆ ಹಕ್ಕು-ಅಧಿಕಾರಗಳಿಗಾಗಿ ಮುಂದವರಿಯುತ್ತಿತ್ತು.

ಸ್ವದೇಶೀ ಚಳವಳದ ಪರಿಣಾಮವಾಗಿ ಕಾಂಗ್ರೆಸಿನ ಒಳಗೂ ಹೊರಗೂ ತಿಲಕರ ಪ್ರಭಾವ ಹೆಚ್ಚಿತು. ಅವರೀಗ ಕಾಂಗ್ರೆಸು ಹೊಸ ಹಾದಿ ತುಳಿಯುವಂತೆ ಯತ್ನಿಸಿದರು.

ಬಂಗಾಳದ ವಿಭಜನೆಯಾದ ವರ್ಷ (1905) ಕಾಂಗ್ರೆಸ್ ಅಧಿವೇಶನ ಬೆನಾರೆಸಿನಲ್ಲಿ ಸೇರಿತ್ತು. ಕಾಂಗ್ರೆಸಿನ ಸರ್ವಾಧಿಕಾರಿಯೆನಿಸಿದ 'ಮುಂಬಯಿಯ ಸಿಂಹ' ಫಿರೋಜ ಷಾ ಮೆಹತಾ ಆ ವರ್ಷ ಅಧಿವೇಶನಕ್ಕೆ

ಬಂದಿರಲಿಲ್ಲ. ಗೋಪಾಲಕೃಷ್ಣ ಗೋಖಲೆಯವರು ಅಧ್ಯಕ್ಷರಾಗಿದ್ದರು. ಅವರು ಇಂಗ್ಲಂಡಿನಲ್ಲಿ ಬಂಗಾಳಿ ಜನತೆಯ ಪರವಾಗಿ ವಾದಿಸಿದ್ದರು. ಭಾಷಣಗಳ ಮೂಲಕ ಸ್ವದೇಶೀ ಚಳವಳವನ್ನು ಪ್ರೋತ್ಸಾಹಿಸಿ, ತಮ್ಮ ಉದಾರವಾದಿ ಪಕ್ಷದಲ್ಲೇ ಅನೇಕರಿಗೆ ಅಚ್ಚರಿಯುಂಟುಮಾಡಿದ್ದರು. ಅವರು ಬನಾರಿಸ್ ಅಧಿವೇಶನದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಲಾರ್ಡ್ ಕರ್ಝನರನ್ನು ಬಲವಾಗಿ ಟೀಕಿಸಿ, ಅವರ ಆಡಳಿತವನ್ನು ಔರಂಗಜೇಬನ ಆಡಳಿತಕ್ಕೆ ಹೋಲಿಸಿದರು; ಸ್ವದೇಶಿ ಮತ್ತು ಬಹಿಷ್ಕಾರ ಚಳವಳಕ್ಕೂ ಬೆಂಬಲ ಕೊಟ್ಟರು. ಅಧಿವೇಶನದಲ್ಲಿ, ನೌಕರಶಾಹಿಯ ದಬ್ಬಾಳಿಕೆಯ ನೀತಿಯನ್ನು ಖಂಡಿಸುವ ಗೊತ್ತುವಳಿ ಸ್ವೀಕಾರವಾಯಿತು. ಅದೇ ಗೊತ್ತುವಳಿಯಲ್ಲಿ, ಬಂಗಾಳದ ಜನರು ಬ್ರಿಟಿಷ್ ವಸ್ತುಗಳಿಗೆ ಬಹಿಷ್ಕಾರ ಹಾಕಿದುದನ್ನೂ ಸಮರ್ಥಿಸಲಾಗಿತ್ತು. ಬಹಿಷ್ಕಾರದ ಬಗ್ಗೆ ಪ್ರತ್ಯೇಕ ಗೊತ್ತುವಳಿಯೊಂದನ್ನೇ ತರಬೇಕೆಂದು ತಿಲಕರಿಗಿತ್ತು. ಅಷ್ಟೇ ಅಲ್ಲ; ಬಂಗಾಳದ ಜನರಿಗೆ ಸಹಾನುಭೂತಿ ವ್ಯಕ್ತಪಡಿಸುವುದಕ್ಕಾಗಿ ಇತರ ಪ್ರಾಂತಗಳಿಗೂ ಬಹಿಷ್ಕಾರದ ಕರೆಕೊಡಬೇಕೆಂದು ಅವರು ಬಯಸಿದ್ದರು. ಆದರೆ ಉದಾರವಾದಿಗಳು ಅದಕ್ಕಿನ್ನೂ ಸಿದ್ಧರಿರಲಿಲ್ಲ. ತಿಲಕರು ಅದರಿಂದೇನೂ ನಿರಾಶರಾಗಲಿಲ್ಲ. ಕಾಂಗ್ರೆಸು ತನ್ನ ಹಿಂದಿನ ಸೌಮ್ಯಮಾರ್ಗವನ್ನು ಬಿಟ್ಟು ಬಹಿಷ್ಕಾರಕ್ಕೆ ಬೆಂಬಲಕೊಟ್ಟದ್ದೇ ಅವರ ದೊಡ್ಡ ವಿಜಯ.

ಮುಂದಿನ ವರ್ಷದ ಕಾಂಗ್ರೆಸ್ ಅಧಿವೇಶನ ಕಲ್ಕತ್ತದಲ್ಲಿ. ಬಾಬೂ ಬಿಪಿನಚಂದ್ರ ಪಾಲರು ತಿಲಕರ ಹೆಸರನ್ನು ಅಧ್ಯಕ್ಷ ಸ್ಥಾನಕ್ಕೆ ಸೂಚಿಸಿದರು. ದೇಶದ ಅತ್ಯುಚ್ಚ ಗೌರವದ ಸ್ಥಾನಕ್ಕೆ ಅವರ ಹೆಸರು ಸೂಚಿತವಾದುದು ಇದುವೇ ಮೊದಲಬಾರಿ. ಉದಾರವಾದಿಗಳಿಗೆ ಇದು ಚಿಂತೆಗಿಟ್ಟಿಕೊಂಡಿತು. ಈ 'ಗಂಡಾಂತರ'ದಿಂದ ತಪ್ಪಿಸಿಕೊಳ್ಳುವುದು ಹೇಗೆಂದು ಫಿರೋಜ ಷಾ ಮೆಹತರ ಆದಿಯಾಗಿ ಎಲ್ಲ ಉದಾರವಾದಿ ಮುಖಂಡರೂ ಯೋಚಿಸತೊಡಗಿದರು ಕೊನೆಗೆ ಅವರಿಗೆ ಒಂದು ಆಲೋಚನೆ ಹೊಳೆಯಿತು. ಇಂಗ್ಲಂಡಿನಲ್ಲಿದ್ದ ದಾದಾಭಾಯಿ ನೌರೋಜಿಯವರಿಗೆ ಕಲ್ಕತ್ತ ಅಧಿವೇಶನದ ಅಧ್ಯಕ್ಷಸ್ಥಾನ ವಹಿಸುವಂತೆ ಅವಸರದ ಕರೆಕಳುಹಿಸಿದರು. ನೌರೋಜಿಯವರ ಬಗ್ಗೆ ಎಲ್ಲರಿಗೂ ಆದರ-ಗೌರವ. ಅವರ ವಿರುದ್ಧ ರಾಷ್ಟ್ರೀಯವಾದಿಗಳು ಕೂಡ ಸ್ಪರ್ಧಿಸಲಾರರೆಂದು ಉದಾರವಾದಿಗಳು

ತಿಳಿದಿದ್ದರು. ಅದಕ್ಕಾಗಿಯೇ ಈ ತಂತ್ರ. ನೌರೋಜಿಯವರಾದರೋ ಕಾಂಗ್ರೆಸಿನ ಕರೆ ಬಂದಾಗ ಯಾವಾಗಲೂ 'ಒಲ್ಲೆ' ಎಂದವರಲ್ಲ. ಅಧ್ಯಕ್ಷರಾಗಲು ಅವರು ಕೂಡಲೇ ಒಪ್ಪಿಗೆ ಕೊಟ್ಟರು.

ಅಧ್ಯಕ್ಷಪದದ ಸಮಸ್ಯೆಯೇನೋ ಬಗೆಹರಿಯಿತು. ಆದರೆ ಕಾಂಗ್ರೆಸಿನ ಧೋರಣೆಯಲ್ಲಿ ತೀವ್ರ ಬದಲಾವಣೆಗಳಾಗಬೇಕೆಂಬ ರಾಷ್ಟ್ರೀಯವಾದಿಗಳ ಪ್ರಯತ್ನದಿಂದ ತಪ್ಪಿಸಿಕೊಳ್ಳುವುದು ಹೇಗೆ? ಬಂಗಾಳ ಮೊದಲೇ ರಾಷ್ಟ್ರೀಯವಾದಿಗಳ ಪ್ರಬಲ ಕೇಂದ್ರ. ಅಲ್ಲದೆ ಅಧಿವೇಶನಕ್ಕೆ ಬಂದ ಪ್ರತಿನಿಧಿಗಳ ಬೆಂಬಲವೂ ಅವರಿಗೆ ಸಾಕಷ್ಟು ಇತ್ತು. ದೇಶಕ್ಕೆ ದೇಶವೇ ಕಲ್ಕತ್ತ ಅಧಿವೇಶನದ ಕಾರ್ಯಕಲಾಪಗಳನ್ನು ಇದಿರುನೋಡುತ್ತಿತ್ತು.

ಬಾಬೂ ಬಿಪಿನಚಂದ್ರ ಪಾಲ್ ಮತ್ತು ತಿಲಕರು ಕಾಂಗ್ರೆಸ್ ಕೈಕೊಳ್ಳಬೇಕಾದ ಕಾರ್ಯಕ್ರಮಗಳ ಕುರಿತು ಚರ್ಚಿಸುವ ಬಗ್ಗೆ ಅಧಿವೇಶನಕ್ಕೆ ಬಂದ ರಾಷ್ಟ್ರೀಯವಾದಿ ಪ್ರತಿನಿಧಿಗಳ ಒಂದು ಸಭೆ ಕರೆದರು. ಈ ಸಭೆಯಲ್ಲಿ ಸ್ವದೇಶಿ, ವಿದೇಶೀ ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣ ಇವುಗಳ ಬಗ್ಗೆ ಮೂರು ಪ್ರತ್ಯಪ್ರತ್ಯೇಕ ಗೊತ್ತುವಳಿಗಳನ್ನು ಸ್ವೀಕರಿಸಬೇಕೆಂದು ನಿರ್ಣಯವಾಯಿತು. ಇವುಗಳಲ್ಲಿ ರಾಷ್ಟ್ರೀಯ ಶಿಕ್ಷಣದ ಗೊತ್ತುವಳಿಯೇನೋ ಯಾವ ವಿರೋಧವೂ ಇಲ್ಲದೆ ವಿಷಯ ನಿಯಾಮಕ ಸಮಿತಿಯಲ್ಲಿ ಸ್ವೀಕೃತವಾಯಿತು. ಆದರೆ ಸ್ವದೇಶಿ ಮತ್ತು ಬಹಿಷ್ಕಾರಕ್ಕೆ ಸಂಬಂಧಿಸಿದ ಗೊತ್ತುವಳಿಗಳಿಗೆ ಉದಾರವಾದಿಗಳಿಂದ ವಿರೋಧ ಬಂತು. ತಿಲಕರು ಸರ್ ಫಿರೋಜ ಷಾ ಮೆಹತಾ ಮೊದಲಾದ ಮುಖಂಡರೊಡನೆ ಅನೇಕ ಸಲ ಮಾತಿನ ಯುದ್ಧ ಹೂಡಬೇಕಾಯಿತು. ಕೊನೆಗೆ ಈ ಎರಡು ಗೊತ್ತುವಳಿಗಳೂ ಸ್ವೀಕರಿಸಲ್ಪಟ್ಟುವು. ಸ್ವರಾಜ್ಯದ ಬಗ್ಗೆ ಒಂದು ಗೊತ್ತುವಳಿ ಮೊದಲೇ ಮಾನ್ಯವಾಗಿತ್ತು. ದಾದಾಭಾಯಿ ನೌರೋಜಿಯವರ ಅಧ್ಯಕ್ಷ ಭಾಷಣದ ಮುಖ್ಯ ವಿಷಯವೂ ಸ್ವರಾಜ್ಯವೇ ಆಗಿತ್ತು.

ಹಿಂದಿನ ವರ್ಷ ಬೆನಾರೆಸ್‌ನಲ್ಲಿ ನಡೆದ ಅಧಿವೇಶನದಲ್ಲಿ ಬ್ರಿಟಿಷ್ ವಸ್ತುಗಳ ಬಹಿಷ್ಕಾರವನ್ನು ಮಾತ್ರ ಸಮರ್ಥಿಸಲಾಗಿತ್ತು. ಕಲ್ಕತ್ತಾ ಅಧಿವೇಶನದ ಗೊತ್ತುವಳಿ ಆರ್ಥಿಕ ಬಹಿಷ್ಕಾರಕ್ಕೆ ಮಾತ್ರವಲ್ಲದೆ ರಾಜಕೀಯ ಬಹಿಷ್ಕಾರಕ್ಕೂ ಕರೆಕೊಟ್ಟಿತು. ತಿಲಕರು ಬಯಸಿದಂತೆ ಗೊತ್ತುವಳಿ ಬಂಗಾಳದ ಹೊರಗೆ ಬಹಿಷ್ಕಾರ ಚಳವಳವನ್ನು ಸಮರ್ಥಿಸಲಿಲ್ಲ. ಆದರೆ ಅದನ್ನು ನಿಷೇಧಿಸಲೂ ಇಲ್ಲ.

ಕಲ್ಕತ್ತಾ ಅಧಿವೇಶನ ರಾಷ್ಟ್ರೀಯವಾದಿಗಳಿಗೆ ದೊಡ್ಡ ವಿಜಯ. ಅಧಿವೇಶನದ ಕಾರ್ಯಕಲಾಪಗಳ ಕುರಿತು ತಿಲಕರು ಹೀಗೆ ಹೇಳಿರುವರು:

"ಸ್ವರಾಜ್ಯ ಅಥವಾ ಸ್ವಾಯತ್ತ ಸರಕಾರ ರಾಷ್ಟ್ರದ ಗುರಿ ಎಂಬುದನ್ನು ಕಾಂಗ್ರೆಸ್ ಈಗ ಸ್ಪಷ್ಟಪಡಿಸಿದೆ. ಸಂಕಷ್ಟಗಳ ನಿವಾರಣೆಗಾಗಿ ಮತ್ತು ರಾಜಕೀಯ ಆಕಾಂಕ್ಷೆಗಳನ್ನು ಈಡೇರಿಸುವ ಬಗ್ಗೆ ಘಟನಾತ್ಮಕ ಚಳವಳದ ಅಂಗವಾಗಿ ರಾಷ್ಟ್ರ ಸರಕಾರಕ್ಕೆ ಮನವಿ ಪ್ರಾರ್ಥನೆಗಳನ್ನು ಕಳುಹಿಸಬಹುದು. ಆದರೆ ಗುರಿ ಸಾಧಿಸಲು ಮುಖ್ಯವಾಗಿ ನಮ್ಮ ಪ್ರಯತ್ನವನ್ನೇ ಹೊಂದಿಕೊಂಡಿರಬೇಕಾಗಿದೆ. ಸ್ವದೇಶಿ, ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣ- ಇವು ಕಾಂಗ್ರೆಸ್ ನಮ್ಮ ಕೈಗಿತ್ತ ಮೂರು ಪ್ರಬಲ ಅಸ್ತ್ರಗಳು. ಇವುಗಳ ಮೂಲಕ ನಾವು ಸ್ವರಾಜ್ಯ ಸ್ಥಾಪಿಸಬೇಕು."

ಕಲ್ಕತ್ತ ಅಧಿವೇಶನದಲ್ಲಿ ಮೂಗುಮುರಿದುಕೊಂಡ ಉದಾರವಾದಿಗಳು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಮುಂದಿನ ವರ್ಷ ಬೇರೆ ಬೇರೆ ಪ್ರಾಂತ್ಯಗಳಲ್ಲಿ ನಡೆದ ಪ್ರಾಂತೀಯ ಪರಿಷತ್ತುಗಳಲ್ಲಿ ಕಲ್ಕತ್ತದ ನಿರ್ಣಯಗಳನ್ನು ಮೂಲೆಗೆ ತಳ್ಳುವ ಪ್ರಯತ್ನ ನಡೆಯಿತು. ಸೂರತ್‌ನಲ್ಲಿ ನಡೆದ ಪ್ರಾಂತೀಯ ಪರಿಷತ್ತಿನಲ್ಲಿ ತಿಲಕರು ಇಲ್ಲದಿದ್ದುದರಿಂದ ಫಿರೋಜ ಷಾ ಮೆಹತಾ ರಾಷ್ಟ್ರೀಯ ಶಿಕ್ಷಣ ಮತ್ತು ಬಹಿಷ್ಕಾರ ಗೊತ್ತುವಳಿಗಳನ್ನು ತಳ್ಳಿಹಾಕುವುದರಲ್ಲಿ ಸಫಲರಾದರು. ಅಲ್ಲಹಾಬಾದಿನಲ್ಲಿ ಪಂಡಿತ ಮದನಮೋಹನ ಮಾಲವೀಯರು ತಮ್ಮ ಪ್ರಾಂತ್ಯ ಬಹಿಷ್ಕಾರವನ್ನು ಒಪ್ಪುವುದಿಲ್ಲವೆಂದು ಹೇಳಿ, ಇನ್ನೂರು ಮಂದಿ ರಾಷ್ಟ್ರೀಯವಾದಿ ಪ್ರತಿನಿಧಿಗಳಿಗೆ ಪ್ರವೇಶವನ್ನೇ ಕೊಡಲಿಲ್ಲ. ರಾಯಪುರ (ಬಿಹಾರ್)ದಲ್ಲಿ ನಡೆದ ಪ್ರಾಂತೀಯ ಪರಿಷತ್ತಿನಲ್ಲಿ 'ವಂದೇ ಮಾತರಂ' ಗೀತ ಹಾಡುವುದಕ್ಕೆ ಕೂಡ ಉದಾರವಾದಿಗಳು ವಿರೋಧ ವ್ಯಕ್ತಪಡಿಸಿದರು.

ಆದರೆ, ಕಲ್ಕತ್ತಾ ಗೊತ್ತುವಳಿಗಳಿಂದ ಹಿಮ್ಮೆಟ್ಟುವ ಉದಾರವಾದಿಗಳ ಪ್ರಯತ್ನ ಪೂರ್ತಿ ಸಫಲಗೊಂಡುದು 1907ರಲ್ಲಿ ಸೂರತ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ.

೭

# ತಾಯಿ ಮಹಾರಾಜ ಖಟ್ಲೆ

ಬಾಲಗಂಗಾಧರ ತಿಲಕರ ಜೀವನವನ್ನು ಚಿತ್ರಿಸುವಾಗ ಅವರು 1897ರಿಂದ 1915ರ ವರೆಗೆ ಹೆಣಸಾಡಬೇಕಾಗಿ ಬಂದ 'ತಾಯಿ ಮಹಾರಾಜ ಖಟ್ಲೆ'ಯನ್ನು ಮರೆಯುವುದು ಸಾಧ್ಯವಿಲ್ಲ. ಲೋಕಮಾನ್ಯರ ಶೀಲ-ಚಾರಿತ್ರ್ಯಗಳ ಮೇಲೆ ಕೆಸರೆರಚಿ, ಲೋಕದ ಮುಂದೆ ಅವರು ಅಪ್ರಾಮಾಣಿಕರು, ಮೋಸಗಾರರು ಎಂದು ಸಾಧಿಸಲು ನಡೆಯಿಸಿದ ದೊಡ್ಡ ಕುತಂತ್ರ ಇದು. ಪೂನಾದ ಅವರ ಖಾಸಗಿ ವಿರೋಧಿಗಳು ಮಾತ್ರವಲ್ಲದೆ, ಬ್ರಿಟಿಷ್ ನೌಕರಶಾಹಿ ಕೂಡ ತಂತ್ರದಲ್ಲಿ ಸೇರಿ ತನ್ನ ರಾಜಕೀಯ ವೈರಿಯ ಬಲವನ್ನು ಮುರಿಯಲು ಯತ್ನಿಸಿತ್ತು. ಈ ಖಟ್ಲೆ ತಿಲಕರಿಗೆ ಅಪಾರ ಧನವ್ಯಯಕ್ಕೆ ಕಾರಣವಾದುದಲ್ಲದೆ, ಅವರ ಜೀವನದ ಅಮೂಲ್ಯ ಆರು ವರ್ಷಗಳು ಅದಕ್ಕಾಗಿ ವಿನಿಯೋಗವಾಗಿದ್ದುವು. ಖಟ್ಲೆ ನಡೆಯುತ್ತಿದ್ದಷ್ಟು ಕಾಲವೂ ಅವರ ಸ್ಥಿತಿ ಬಿರುಗಾಳಿಗೆ ಸಿಲುಕಿದ ನೌಕೆಯಂತಾಗಿತ್ತು. ಕೊನೆಗಂತೂ ಅವರು ಈ ಮಹಾಸತ್ವಪರೀಕ್ಷೆಯಲ್ಲಿ ವಿಜಯಿಯಾಗಿ ಬಂದರು. ಕುಲುಮೆಯಲ್ಲಿ ಕುದಿದು ಪರಿಶುದ್ಧವಾದ ಚಿನ್ನದಂತೆ ಅವರ ಚಾರಿತ್ರ್ಯ ಬೆಳಗಿತು. ಸತ್ಯ ಜಯಿಸಿತು; ನ್ಯಾಯ ಗೆದ್ದಿತು.

ಬಾಬಾ ಮಹಾರಾಜರು ತಿಲಕರ ಸ್ನೇಹಿತರು. ಇವರು ಮೃತ್ಯುಪತ್ರವೊಂದನ್ನು ಬರೆದಿಟ್ಟು ನಿಧನ ಹೊಂದಿದ್ದರು. ಈ ಮೃತ್ಯುಪತ್ರದಲ್ಲಿ ತಿಲಕರು ಹಾಗೂ ಇನ್ನು ಕೆಲವರನ್ನು ಅವರ ಆಸ್ತಿಯ ವಿಶ್ವಸ್ಥರಾಗಿ ನೇಮಕ ಮಾಡಿದ್ದರು.

ಬಾಬಾ ಮಹಾರಾಜರು ನಿಧನ ಹೊಂದುವಾಗ ಅವರ ಹೆಂಡತಿಯ ಪ್ರಾಯ ಹದಿನೈದು ವರ್ಷ. ಆಕೆ ಗರ್ಭಿಣಿಯಾಗಿದ್ದಳು. ಮಹಾರಾಜರು, ತನ್ನ ಪತ್ನಿ ಗಂಡುಮಗುವನ್ನು ಹೆರದಿದ್ದರೆ ಅಥವಾ ಹೆತ್ತ ಗಂಡುಮಗು ತೀರಿಕೊಂಡರೆ, ವಿಶ್ವಸ್ಥರಲ್ಲಿ ವಿಚಾರಿಸಿ ಯೋಗ್ಯನಾದವ

ನೊಬ್ಬನನ್ನು ದತ್ತಕ್ಕೆ ತೆಗೆದುಕೊಳ್ಳುವ ಅಧಿಕಾರವನ್ನು ಆಕೆಗೆ ಕೊಟ್ಟಿದ್ದರು. ಹಾಗೆ ಹುಟ್ಟಿದ ಅಥವಾ ದತ್ತಕ್ಕೆ ತೆಗೆದುಕೊಂಡ ಮಗುವು ಪ್ರಾಯಕ್ಕೆ ಬರುವ ವರೆಗೆ ಸ್ಥಿರ-ಚರ ಆಸ್ತಿಗಳ ಆಡಳಿತವನ್ನು ವಿಶ್ವಸ್ಥರೇ ನೋಡಿಕೊಳ್ಳಬೇಕು ಎಂದು ಮೃತ್ಯುಪತ್ರದಲ್ಲಿ ಬರೆದಿತ್ತು.

ವಿಧವೆ ತಾಯಿ ಮಹಾರಾಜಳು ಗಂಡುಮಗುವನ್ನೇನೋ ಹೆತ್ತಳು. ಆದರೆ ಆ ಮಗು ಎರಡು ತಿಂಗಳಲ್ಲೇ ತೀರಿಕೊಂಡಿತು.

ತಿಲಕರು ತಾಯಿ ಮಹಾರಾಜ ಮತ್ತು ಉಳಿದ ವಿಶ್ವಸ್ಥರೊಡನೆ ವಿಚಾರಿಸಿ ದತ್ತಕ್ಕೆ ತೆಗೆದುಕೊಳ್ಳಲು ಯೋಗ್ಯನಾದ ಹುಡುಗನೊಬ್ಬನನ್ನು ಹುಡುಕಿದರು. ಬಾಬಾ ಮಹಾರಾಜರ ಕುಟುಂಬದ ಪೂನಾ ಮತ್ತು ಕೊಲ್ಹಾಪುರ ಶಾಖೆಗಳಲ್ಲಿ ಯಾರೂ ಸಿಗದಿದ್ದುದರಿಂದ ಮೂರು ವರ್ಷಗಳ ವರೆಗೆ ಅವರ ಪ್ರಯತ್ನ ಸಫಲವಾಗಲಿಲ್ಲ. ಇದೇ ಸಮಯದಲ್ಲಿ ಕೊಲ್ಹಾಪುರದ ಬಾಲಾ ಮಹಾರಾಜ ಎಂಬವನನ್ನು ದತ್ತಕ್ಕೆ ತೆಗೆದುಕೊಳ್ಳುವಂತೆ ತಾಯಿ ಮಹಾರಾಜಳ ಮೇಲೆ ಒಳಗೊಳಗೇ ಒತ್ತಾಯ ನಡೆಯುತ್ತಿತ್ತು.

ಕೊನೆಗೆ ಔರಂಗಾಬಾದಿನ ಬಾಬ್ರೆ ಶಾಖೆಯ ಜಗನ್ನಾಥ ಎಂಬ ಹುಡುಗನನ್ನು ದತ್ತಕ್ಕೆ ತೆಗೆದುಕೊಳ್ಳಲು ಒಪ್ಪಿಗೆಯಾಯಿತು. ತಾಯಿ ಮಹಾರಾಜಳದೂ ಆಗ ಇದಕ್ಕೆ ಪೂರ್ಣ ಸಮ್ಮತಿಯಿತ್ತು. ಕೊಡುಕೊಳ್ಳುವ ಕೆಲಸಗಳು ನಡೆದುವು; ದತ್ತಕ್ಕೆ ಸಂಬಂಧಿಸಿದ ಕಾಗದಪತ್ರಗಳೂ ಸಹಿಮಾಡಲ್ಪಟ್ಟವು. ಔಪಚಾರಿಕ ಸಂಸ್ಕಾರ-ಸಂಭ್ರಮಗಳು ನಡೆಯುವುದು ಮಾತ್ರ ಬಾಕಿಯಿತ್ತು.

ಸಾಮಾನ್ಯ ಸಂದರ್ಭಗಳಲ್ಲಾದರೆ ಈ ಪ್ರಕರಣ ಅಲ್ಲಿಗೇ ಮುಗಿಯುತ್ತಿತ್ತು. ಆದರೆ ಈ ಸಂದರ್ಭದಲ್ಲಿ ಮಾತ್ರ ಅದು ದೊಡ್ಡ ಕೋಲಾಹಲವನ್ನೇ ಎಬ್ಬಿಸಿತು.

ತಿಲಕರ ವಿರೋಧಿಗಳನೇಕರು ಇಷ್ಟರಲ್ಲೇ ತಾಯಿ ಮಹಾರಾಜಳ ಬಳಿ ಸೇರಿಕೊಂಡು ಆಕೆಯ ಒಲವನ್ನು ಸಂಪಾದಿಸಿಕೊಂಡಿದ್ದರು. ಅವರು ಈ ಬಾಲವಿಧವೆಯ ಕಿವಿಯೂದಿ ಅವಳನ್ನು ತಿಲಕರ ವಿರುದ್ಧ ಪ್ರಚೋದಿಸಿದರು. ಅವಳು ಈಗ ಔರಂಗಾಬಾದಿನ ದತ್ತ ಸ್ವೀಕಾರವನ್ನು ನಿರಾಕರಿಸಲು ಪ್ರಾರಂಭಿಸಿದಳು. ಹಿಂದೆ ಹೇಳಿದ ಬಾಲಾ ಮಹಾರಾಜ ತಾನೇ ನಿಜವಾದ ದತ್ತಪುತ್ರ ಎಂದು ಸಾಧಿಸತೊಡಗಿದ. ವಿಶ್ವಸ್ಥರೆಲ್ಲರೂ ಒಗ್ಗಟ್ಟಿ

ನಿಂದಿರುತ್ತಿದ್ದರೆ ತಿಲಕರ ವಿರೋಧಿಗಳ ಈ ತಂತ್ರ ಅಷ್ಟುಬೇಗನೆ ಯಶಸ್ವಿಯಾಗುತ್ತಿರಲಿಲ್ಲ. ಆದರೆ ವಿಶ್ವಸ್ಥರಲ್ಲೊಬ್ಬನಾದ ನಾಗ್ಪುರ್‌ಕರ್ ಎಂಬವನು ಕೂಡ ಅವರೊಡನೆ ಸೇರಿಕೊಂಡಿದ್ದ. ಸಾಲದುದಕ್ಕೆ ಅವರಿಗೆ ಸರಕಾರದ ಸಹಾಯವೂ ಸಿಕ್ಕಿತು ತಿಲಕರೆಂದರೆ ಕನಸಿನಲ್ಲೂ ಹೆದರುತ್ತಿದ್ದ ಸರಕಾರ ಅವರನ್ನು ಸದೆಬಡಿಯಲು ಸಮಯ ಕಾಯುತ್ತಿತ್ತು. ತಾಯಿ ಮಹಾರಾಜಳ ಪ್ರಕರಣ ಸರಕಾರಕ್ಕೆ ಒಳ್ಳೆಯ ಸಂದರ್ಭವನ್ನು ಒದಗಿಸಿಕೊಟ್ಟಿತು.

ಆಸ್ಟನ್ ಎಂಬವರ ಮೂಲಕ ಸರಕಾರ ತನ್ನ ಕೆಲಸ ಸಾಧಿಸಿತು. ಆಸ್ಟನ್ ಪೂನಾದ ಜಿಲ್ಲಾ ನ್ಯಾಯಾಧೀಶರು; ಅಲ್ಲದೆ ದಕ್ಷಿಣದ ಸರದಾರರಿಗೆ ಏಜಂಟ್. ತಾಯಿ ಮಹಾರಾಜಳು ಅವರ ಮರೆಹೊಕ್ಕಳು. ತಿಲಕರ ವಿರುದ್ಧ ಆಕೆಗೆ ಸಹಾಯ ಮಾಡಲು ಅವರು ಉತ್ಸಾಹದಿಂದ ಒಪ್ಪಿಕೊಂಡರು.

ತಾಯಿ ಮಹಾರಾಜಳು ಮೊದಲು, 1901ನೇ ಜುಲಾಯಿ 21ರಂದು ತಿಲಕರಿಗೆ ಮತ್ತು ಇತರ ವಿಶ್ವಸ್ಥರಿಗೆ ಬಾಬಾ ಮಹಾರಾಜರ ಮೃತ್ಯುಪತ್ರವನ್ನು ಅಮಲಿನಲ್ಲಿ ತರಲುಕೊಟ್ಟ ಅಧಿಕಾರ ಪತ್ರವನ್ನು ರದ್ದುಗೊಳಿಸುವಂತೆ ಅರ್ಜಿ ಮಾಡಿಕೊಂಡಳು. ಅರ್ಜಿ ಆಸ್ಟನ್ ಸಾಹೇಬರ ಮುಂದೆಯೇ ವಿಚಾರಣೆಗೆ ಬಂತು. ಮೊದಲೇ ತಾಯಿ ಮಹಾರಾಜಳಿಗೆ ಆಶ್ವಾಸನೆಕೊಟ್ಟಿದ್ದ ಈ ಸಾಹೇಬರ ಮುಂದೆ ತಿಲಕರಿಗೆ ಎಷ್ಟರಮಟ್ಟಿಗೆ ನ್ಯಾಯ ಸಿಗಬಹುದೆಂದು ತಿಳಿದೇ ಇತ್ತು. ಆದುದರಿಂದ ತಿಲಕರು ಅರ್ಜಿಯ ವಿಚಾರಣೆಯನ್ನು ಬೇರೆಡೆಗೆ ವರ್ಗಾಯಿಸಬೇಕೆಂದು ಹೈಕೋರ್ಟಿಗೆ ಮನವಿಮಾಡಿಕೊಂಡರು. ಆದರೆ ಮನವಿಯನ್ನು ಹೈಕೋರ್ಟು ಮನ್ನಿಸಲಿಲ್ಲ.

ತಾಯಿ ಮಹಾರಾಜಳಿಗೆ ಗಂಡುಮಗು ಹುಟ್ಟಿ ಸತ್ತುದರಿಂದ ತಿಲಕರಿಗೆ ಮತ್ತು ಇತರ ವಿಶ್ವಸ್ಥರಿಗೆ ಬಾಬಾ ಮಹಾರಾಜರ ಮೃತ್ಯುಪತ್ರವನ್ನು ಅಮಲಿನಲ್ಲಿ ತರಲುಕೊಟ್ಟ ಅಧಿಕಾರಪತ್ರ ರದ್ದಾಗುವುದೆ? ಎಂಬುದು ಆಸ್ಟನ್ ಸಾಹೇಬರು ನಿರ್ಣಯಿಸಬೇಕಾದ ಪ್ರಶ್ನೆಯಾಗಿತ್ತು. ಆದರೆ ಸಾಹೇಬರು ಇಷ್ಟರಲ್ಲೇ ನಿಲ್ಲದೆ ಔರಂಗಾಬಾದಿನ ದತ್ತಸ್ವೀಕಾರ ಪ್ರಶ್ನೆಯನ್ನೂ ಎತ್ತಿಕೊಂಡರು. ತಿಲಕರು ಇದನ್ನು ವಿರೋಧಿಸಿದರೂ ಪ್ರಯೋ

ಜನವಾಗಲಿಲ್ಲ. ಕೊನೆಗೆ ತೀರ್ಪು ಬಂತು. ನ್ಯಾಯಾಧೀಶರು ಅಧಿಕಾರ ಪತ್ರವನ್ನು ರದ್ದುಗೊಳಿಸಿದ್ದರು. ಅಲ್ಲದೆ ತಿಲಕರ ಮೇಲೆ ಏಳು ಕ್ರಿಮಿನಲ್ ಆರೋಪಗಳನ್ನು ಸಂಗ್ರಹಿಸಿ ಆ ಬಗ್ಗೆ ವಿಚಾರಣೆ ನಡೆಸಲು ಅವರನ್ನು ಸಿಟಿ ಮ್ಯಾಜಿಸ್ಟ್ರೇಟರ ಕಡೆಗೆ 'ಕಮಿಟ್' ಮಾಡಿದ್ದರು

ಈ ಆರೋಪಗಳ ವಿಚಾರಣೆಗೆ ಒಬ್ಬರು ಸ್ಪೆಷಲ್ ಮ್ಯಾಜಿಸ್ಟ್ರೇಟರ ನೇಮಕವಾಯಿತು. ತಿಲಕರ ಮೇಲಿನ ಮೊದಲನೆಯ ಆರೋಪ ಅವರು ವಿಶ್ವಸ್ಥರಲ್ಲೊಬ್ಬನಾದ ನಾಗ್ಪುರ್‌ಕರನ ಮೇಲೆ ನಿಶ್ಶ್ವಾಸವುರಿದ ಸುಳ್ಳು ಆಪಾದನೆ ಹೊರಿಸಿರುವರೆಂಬುದು. ಮ್ಯಾಜಿಸ್ಟ್ರೇಟರು ಮೊದಲು ಇದನ್ನೇ ವಿಚಾರಣೆಗೆ ಎತ್ತಿಕೊಂಡರು. ತಿಲಕರು ತಮ್ಮ ನಿರಪರಾಧಿತ್ವವನ್ನು ಸಿದ್ಧಪಡಿಸಬೇಕಾದರೆ ಎಂಟು ತಿಂಗಳುಗಳ ಕಾಲ ಹೋರಾಡಬೇಕಾಯಿತು. ಕೊನೆಗೆ ಹೈಕೋರ್ಟು ಅವರು ನಿರಪರಾಧಿಗಳೆಂದು ಸಾರಿತು.

ಇದಕ್ಕೆ ಮೊದಲು ತಿಲಕರು ಮೃತ್ಯುಪತ್ರದ ಕುರಿತು ಆಸ್ಟಿನ್ ಸಾಹೇಬರ ತೀರ್ಪಿನ ವಿರುದ್ಧ ಹೈಕೋರ್ಟಿಗೆ ಅಪೀಲು ಮಾಡಿಕೊಂಡಿದ್ದರು. ಹೈಕೋರ್ಟು ಸಾಹೇಬರ ತೀರ್ಪನ್ನು ಬದಿಗೊತ್ತಿ ತಿಲಕರಿಗೆ ಮತ್ತು ಇತರ ವಿಶ್ವಸ್ಥರಿಗೆ ಕೊಟ್ಟ ಅಧಿಕಾರಪತ್ರ ರದ್ದಾಗುವುದಿಲ್ಲವೆಂದು ನಿರ್ಣಯಿಸಿತ್ತು. ಇದರಿಂದಾಗಿ ತಿಲಕರು ಮತ್ತು ಅವರ ಸ್ನೇಹಿತರು ಬಾಬಾ ಸಾಹೇಬರ ಆಸ್ತಿಗಳ ವಿಶ್ವಸ್ಥರಾಗಿ ಪುನಃ ಅಧಿಕಾರ ವಹಿಸಿಕೊಂಡಿದ್ದರು.

ವಿಚಾರಣೆಯಾಗಲು ಇನ್ನೂ ಆರು ಕ್ರಿಮಿನಲ್ ಆರೋಪಗಳಿವೆ. ಅವುಗಳಲ್ಲಿ ಐದು ಗಂಭೀರ ಸ್ವರೂಪದವುಗಳಿದ್ದು ಜ್ಯೂರಿಯ ಮುಂದೆ ವಿಚಾರಣೆಯಾಗಬೇಕಾದವುಗಳು. ಫಿರ್ಯಾದಿದಾರರಿಗೆ ಖಟ್ಲೆಯನ್ನು ಜ್ಯೂರಿಯ ಮುಂದೆ ಕೊಂಡುಹೋಗುವ ಧೈರ್ಯವಿಲ್ಲ. ಆದುದರಿಂದ ಅವರು ಕೊನೆಯ ಆರೋಪವನ್ನೇ ಮೊದಲು ಎತ್ತಿಕೊಂಡರು. ತಿಲಕರು ಉದ್ದೇಶಪೂರ್ವಕವಾಗಿ ಸುಳ್ಳುಪುರಾವೆ ಕೊಟ್ಟಿದ್ದಾರೆಂಬುದೇ ಈ ಆರೋಪ. ಅದಕ್ಕೆ ಜ್ಯೂರಿ ವಿಚಾರಣೆ ಅವಶ್ಯವಿರಲಿಲ್ಲ. ಗಂಭೀರ ಸ್ವರೂಪದ ಆರೋಪಗಳನ್ನು ಮೊದಲು ವಿಚಾರಣೆಗೆ ತೆಗೆದುಕೊಳ್ಳಬೇಕೆಂದು ತಿಲಕರು ಮ್ಯಾಜಿಸ್ಟ್ರೇಟರಿಗೆ ಮನವಿ ಮಾಡಿಕೊಂಡರೂ, ಅವರ ಆಹ್ವಾನವನ್ನು ಮ್ಯಾಜಿಸ್ಟ್ರೇಟರು ಸ್ವೀಕರಿಸಲಿಲ್ಲ

ಸುಳ್ಳುಪುರಾವೆ ಒದಗಿಸಿದ ಆರೋಪದ ವಿಚಾರಣೆಯಾಯಿತು. ಸ್ಪೆಶಲ್ ಮ್ಯಾಜಿಸ್ಟ್ರೇಟ್ ಕ್ಲೆಮೆಂಟ್ಸ್ ತಿಲಕರು ಅಪರಾಧಿಗಳೆಂದು ಸಾರಿ ಅವರಿಗೆ ಹದಿನೆಂಟು ತಿಂಗಳುಗಳ ಕಠಿಣ ಸಜೆ ಮತ್ತು ಸಾವಿರ ರೂಪಾಯಿ ದಂಡ ವಿಧಿಸಿದರು. ಪೋಲೀಸರು ತಿಲಕರಿಗೆ ತಮ್ಮ ವಕೀಲರಿಗೆ ಸೂಚನೆಗಳನ್ನು ಕೊಡಲು ಕೂಡ ಸಮಯ ಕೊಡದೆ ಅವರನ್ನು ಸೆರೆಮನೆಗೆ ಒಯ್ದರು. ಜಾಮೀನಿನ ಮೇಲೆ ಬಿಡುಗಡೆ ಮಾಡಲು ಮ್ಯಾಜಿಸ್ಟ್ರೇಟರು ನಿರಾಕರಿಸಿದರು. ಇದೆಲ್ಲ ಮೊದಲೇ ನಿರ್ಧರಿಸಿದಂತೆ ನಡೆದಿತ್ತು. ತಿಲಕರು ಕೂಡ ಹೀಗೆ ಹೀಗೆಯೇ ನಡೆಯಬಹುದೆಂದು ಊಹಿಸಿದ್ದರು. ಆದುದರಿಂದ ಅವರೇ ಸ್ವತಃ ಮತ್ತು ಅವರ ವಕೀಲರು ಮನೆಯಿಂದ ಬರುವಾಗಲೇ 'ಅಪೀಲು ಮೆಮೋ' ತಯಾರಿಸಿಯೇ ತಂದಿದ್ದರು.

ಸೆಶ್ಯನ್ಸ್ ಕೋರ್ಟಿನಲ್ಲಿ ತಿಲಕರ ನಿರಪರಾಧಿತ್ವ ಸ್ಥಾಪಿಸಲ್ಪಡದಿದ್ದರೂ ಅವರಿಗಾದ ಶಿಕ್ಷೆ ಕಡಿಮೆಯಾಯಿತು. ಪೋಲೀಸರು ಅವರ ಕೈಗಳಿಗೆ ಬೇಡಿತೊಡಿಸಿ ಯೆರವಾಡಾ ಸೆರೆಮನೆಗೆ ಒಯ್ದರು ಇಂತಹ ಶ್ರೇಷ್ಠ ಪುರುಷನಿಗೆ ಬೇಡಿ ತೊಡಿಸಿದುದನ್ನು ಕೇಳಿ ಜನರೊಟ್ಟಿಗೇಳುವುದು ಸಹಜ. ಕಲ್ಕತ್ತದ ಪತ್ರಿಕೆಯೊಂದು ಈ ಘಟನೆಯನ್ನು ನಾಚಿಕೆಗೇಡು ಎಂದು ತೀವ್ರವಾದ ಮಾತುಗಳಲ್ಲಿ ಖಂಡಿಸಿತು. ಆದರೆ ತಿಲಕರನ್ನು ಹಣ್ಣು ಮಾಡಲು ಹೊರಟ ಸರಕಾರ ಯಾವ ನಾಚಿಕೆಗೇಡಿನ ಕೆಲಸಕ್ಕೂ ಹೇಗೆ ಹಿಂಜರಿದೀತು?

ತಿಲಕರು ಹೈಕೋರ್ಟಿಗೆ ಅಪೀಲು ಮಾಡಿಕೊಂಡಾಗ ನ್ಯಾಯಾಧೀಶ ಸರ್ ಲಾರೆನ್ಸ್ ಜೆಕಿನ್ಸರು ಅವರಿಗಾದ ಶಿಕ್ಷೆಯನ್ನು ರದ್ದುಗೊಳಿಸಿದ್ದಲ್ಲದೆ, ಅವರು ನಿರಪರಾಧಿಗಳೆಂದೂ ಸಾರಿದರು. ತಿಲಕರು ಕೊಟ್ಟ ದಂಡವನ್ನು ಅವರಿಗೆ ಹಿಂದಿರುಗಿಸಬೇಕೆಂದೂ ಆಯಿತು. ಮುಂದೆ ಸರಕಾರ ಅವರನ್ನು ಇನ್ನುಳಿದ ಐದು ಆರೋಪಗಳ ಮೇಲೆ ವಿಚಾರಣೆಗೆ ಗುರಿಪಡಿಸುವ ಸಾಹಸ ಮಾಡಲಿಲ್ಲ.

ಔರಂಗಾಬಾದಿನ ದತ್ತಸ್ವೀಕಾರದ ಪ್ರಶ್ನೆ ಇನ್ನೂ ನಿರ್ಣಯವಾಗಲು ಉಳಿದಿದೆ. ಇದು ಸಿವಿಲ್ ವ್ಯಾಜ್ಯ. ವ್ಯಾಜ್ಯವನ್ನು ಫಸ್ಟ್ ಕ್ಲಾಸ್ ಸಬೋರ್ಡಿನೇಟ್ ಜಡ್ಜರ ಮುಂದೆ 1901ನೇ ಸೆಪ್ಟಂಬರ 23ರಂದು ದಾಖಲು ಮಾಡಲಾಗಿದ್ದರೂ ತಿಲಕರ ಮೇಲಿನ ಕ್ರಿಮಿನಲ್ ಆರೋಪಗಳ

ವಿಚಾರಣೆ ಮುಗಿಯುವವರೆಗೆ ಅದನ್ನು ತಡೆಹಿಡಿಯಲಾಗಿತ್ತು. 1904ನೇ ಜೂನ್ ತಿಂಗಳಿನಲ್ಲಿ ಅದನ್ನು ಪುನಃ ವಿಚಾರಣೆಗೆ ತೆಗೆದುಕೊಳ್ಳಲಾಯಿತು. ಔರಂಗಾಬಾದು, ಅಮರಾವತಿ, ಕೊಲ್ಹಾಪುರ ಮೊದಲಾದ ಅನೇಕ ಕಡೆಗಳಲ್ಲಿ ಸಾಕ್ಷಿ ತೆಗೆದುಕೊಳ್ಳಲಿದ್ದುದರಿಂದ ವಿಚಾರಣೆ ಮುಗಿಯಲು ಕೆಲವು ತಿಂಗಳುಗಳು ಹಿಡಿದುವು. ಕೊನೆಗೆ 1906 ನೇ ಜುಲಾಯಿ 31ರಂದು ತೀರ್ಮಾನವಾಗಿ ತಿಲಕರು ಜಯಗಳಿಸಿದರು.

ಇಷ್ಟರಲ್ಲಿ ತಾಯಿ ಮಹಾರಾಜಳು ತೀರಿಕೊಂಡಿದ್ದಳು. ಆದುದರಿಂದ, ತಾನೇ ಆಕೆಯ ದತ್ತಪುತ್ರನೆಂದು ಹೇಳಿಕೊಳ್ಳುತ್ತಿದ್ದ ಬಾಲಾ ಮಹಾರಾಜನು ಹೈಕೋರ್ಟಿಗೆ ಅಪೀಲು ಮಾಡಿಕೊಂಡನು. ನಾಲ್ಕು ವರ್ಷಗಳ ಅನಂತರ ಹೈಕೋರ್ಟು ತಿಲಕರ ವಿರೋಧವಾಗಿ ತೀರ್ಪಿತ್ತಿತು. ತಿಲಕರು ಇಷ್ಟರಲ್ಲೇ ನಿಲ್ಲದೆ ಪ್ರಿವಿ ಕೌನ್ಸಿಲಿಗೆ ಅಪೀಲು ಮಾಡಿದರು. 1915ನೇ ಮಾರ್ಚ್ 26ರಂದು ಹೊರಬಿದ್ದ ಪ್ರಿವಿ ಕೌನ್ಸಿಲಿನ ತೀರ್ಪಿನಲ್ಲಿ ಹೈಕೋರ್ಟಿನ ನಿರ್ಣಯವನ್ನು ತಿರಸ್ಕರಿಸಿ ಸಬೋರ್ಡಿನೇಟ್ ಜಡ್ಜರ ನಿರ್ಣಯವನ್ನೇ ಎತ್ತಿಹಿಡಿಯಲಾಯಿತು. ಔರಂಗಾಬಾದಿನ ದತ್ತಸ್ವೀಕಾರವು ಸಿಂಧುವೆಂದಾಯಿತು.

ಇಲ್ಲಿಗೆ ಈ ದೀರ್ಘ ಖಟ್ಲೆಯ ಇತಿಹಾಸ ಮುಗಿಯಿತು.

'ತಾಯಿ ಮಹಾರಾಜ ಖಟ್ಲೆ'ಯ ಕುರಿತು ಬರೆಯುತ್ತ ಡಿ. ವಿ. ಅತಲ್ಯೆಯವರು ಹೀಗೆನ್ನುತ್ತಾರೆ:

"ಈ ಖಟ್ಲೆಯ ಕಾಲದಲ್ಲಿ ಸರಕಾರ ವಹಿಸಿದ ಪಾತ್ರದಿಂದ ಸರಕಾರದ ಬಗ್ಗೆ ಜನತೆಗಿದ್ದ ಗೌರವ ಕಡಿಮೆಯಾಗಿದೆ. ಒಂದು ರೀತಿಯಲ್ಲಿ ಅದು ಪರೋಕ್ಷವಾಗಿ ತಿಲಕರಿಗೆ ಸಲ್ಲಿಸಿದ ಗೌರವವೆನ್ನಬಹುದು. ಕಳೆದ ನೂರು ವರ್ಷಗಳಲ್ಲಿ, ದೇಶಕ್ಕಾಗಿ ಎಂದೆಂದೂ ಮರೆಯಲಾರದ ತ್ಯಾಗ-ಸೇವೆಗಳನ್ನು ಸಲ್ಲಿಸಿದ ಅನೇಕ ವೀರರಿಗೆ ಭಾರತ ಜನ್ಮವಿತ್ತಿದೆ. ಆದರೆ ಇವರೆಲ್ಲರಲ್ಲಿ ತಿಲಕರೊಬ್ಬರೇ ಸರಕಾರದ ಗಮನವನ್ನು ಸೆಳೆದವರೆಂದರೆ ಇದು ಏನನ್ನು ಸೂಚಿಸುತ್ತದೆ? ಎರಡು ದಶಕಗಳ ಕಾಲ ಅವರು ಸರಕಾರದ ಪೀಡನೆಗೆ ಬಲಿಯಾದುದು ಕೇವಲ ಒಂದು ಆಕಸ್ಮಿಕ ಘಟನೆಯಲ್ಲ. ಈ ಪೂನಾ ಬ್ರಾಹ್ಮಣನ ವ್ಯಕ್ತಿತ್ವ ಮತ್ತು ಘನತೆಗೆ ಸರಕಾರ ಹೆದರಿ ಹೋಗಿತ್ತು. ಆದುದರಿಂದ ನೌಕರಶಾಹಿ ಅಡ್ಡದಾರಿ ಹಿಡಿದು ತಾಯಿ

ಮಹಾರಾಜ ಖಟ್ಲೆಯನ್ನು ತನ್ನ ರಾಜಕೀಯ ವೈರವನ್ನು ಸಾಧಿಸುವುದ ಕ್ಕಾಗಿ ಉಪಯೋಗಿಸಿಕೊಂಡಿತು. ರಾಜಕೀಯ ರಂಗದಲ್ಲಿ ತಿಲಕರಿಗಿಂತ ಹೆಚ್ಚು ಕಾಲ ಸೇವೆಸಲ್ಲಿಸಿದ ಮುಖಂಡರು ಇದ್ದರು; ಈಗಲೂ ಇದ್ದಾರೆ. ಆದರೆ ಅವರು ಸರಕಾರದ ಕೃಪಾಕಟಾಕ್ಷದ ಸೂರ್ಯ ಪ್ರಕಾಶದಲ್ಲಿ ವಿಹ ರಿಸುವುದಕ್ಕೆ ಹಿಂದುಮುಂದು ನೋಡಲಿಲ್ಲ. ಎಷ್ಟೇ ಹೋರಾಟ ಹೂಡಿ ದರೂ ಅವರು ಸರಕಾರದೊಡನೆ ಸಹಕರಿಸುವುದರಲ್ಲೇ ತೃಪ್ತಿಯನ್ನು ಪಡೆ ಯುತ್ತಿದ್ದರು. ಅವರು ದೇಶಕ್ಕಾಗಿ ಸೇವೆಸಲ್ಲಿಸಿದುದು ತಮ್ಮ ನೌಕರಿಯ ಅಥವಾ ವ್ಯಾಪಾರದ ಬಿಡುವಿನ ವೇಳೆಯಲ್ಲಿ ಮಾತ್ರ. ಅವರು ಕೆಲವೇ ಮಂದಿ ಬುದ್ಧಿಜೀವಿಗಳ ಕಡೆಗೆ ಗಮನ ಕೊಡುತ್ತಿದ್ದರಲ್ಲದೆ, ಜನಸಾಮಾನ್ಯ ರತ್ತ ಹೋಗುತ್ತಿರಲಿಲ್ಲ. ಹೀಗೆ ಹಲವು ವಿಷಯಗಳಲ್ಲಿ ತಿಲಕರು ಅವರಿಂದ ಭಿನ್ನವಾಗಿದ್ದರು. ದೇಶದ ಮುಂದೆ ತಿಲಕರು ಇರಿಸಿದ ಈ ಮುಖಂಡತ್ವದ ಆದರ್ಶವೇ ನೌಕರಶಾಹಿಯನ್ನು ಬೆದರುವಂತೆ ಮಾಡಿದ್ದು. ತಿಲಕರು ಅನುಸರಿಸುತ್ತಿದ್ದ ರಾಜಕೀಯ ಆಂದೋಲನದ ಪೌರುಷಯುಕ್ತ ವಿಧಾನ ಗಳೇ ನೌಕರಶಾಹಿಯ ಅಗಣಿತ ವಿರೋಧದಿಂದ ಅವರ ಬೆನ್ನು ಹತ್ತಲು ಕಾರಣ. ಆದರೆ ಇದಕ್ಕಾಗಿ ತಿಲಕರು ದೂರಿಕೊಳ್ಳಲಿಲ್ಲ; ಅಥವಾ ಸಹಾಯ, ಪರಿಹಾರಗಳನ್ನೂ ಬಯಸಲಿಲ್ಲ. ಅಂತಹ ಪೀಡೆ, ಹಿಂಸೆಗಳು ತಾವು ತಮ್ಮ ರಾಜಕೀಯ ಜೀವನಕ್ಕಾಗಿ ಅವಶ್ಯವಾಗಿ ಕೊಡಬೇಕಾದ ಮೌಲ್ಯ ಎಂದು ಅವರು ತಿಳಿದಿದ್ದರು. ಆದರೆ ಈಗ ನಾವು ಕೇಳ ಬಹುದು, 'ಇದರಿಂದೆಲ್ಲ ಸರಕಾರ ಏನು ಲಾಭ ಪಡೆಯಿತು?' ಎಂದು. ತಿಲಕರನ್ನು ನಾಶಗೊಳಿಸುವುದು ಅಥವಾ ಬಗ್ಗಿಸುವುದು ಅವರಿಂದಾಗ ಲಿಲ್ಲ. ಯೋಗ್ಯ ವ್ಯಕ್ತಿಯೊಬ್ಬನನ್ನು ಅನಾವಶ್ಯವಾಗಿ ಪೀಡಿಸಿದುದಕ್ಕಾಗಿ ಜನತೆಯ ದ್ವೇಷ ಕಟ್ಟಿಕೊಳ್ಳುವುದರಲ್ಲಷ್ಟೇ ಅವರು ಸಫಲರಾದರು."

———

೮

# ಸೂರತ್ ಒಡಕು

ಕಾಂಗ್ರೆಸಿನ ಇತಿಹಾಸದಲ್ಲಿ ಸೂರತ್ ಒಡಕು ಬಹಳ ಪ್ರಸಿದ್ಧವಾಗಿದೆ ಉದಾರವಾದಿಗಳು ಮತ್ತು ರಾಷ್ಟ್ರೀಯವಾದಿಗಳೊಳಗಿನ ಹೋರಾಟ ಸೂರತ್‌ನಲ್ಲಿ ನಡೆದ ಕಾಂಗ್ರೆಸು ಅಧಿವೇಶನದಲ್ಲಿ ಕೊನೆಯ ಘಟ್ಟವನ್ನು ಮುಟ್ಟಿ, ಸಂಸ್ಥೆಯಲ್ಲಿ ದೊಡ್ಡ ಒಡಕಿಗೆ ಕಾರಣವಾಯಿತು.

ಕಲ್ಕತ್ತ ಅಧಿವೇಶನ ಉದಾರವಾದಿಗಳ ಧೋರಣೆಗೆ ಸೋಲನ್ನು ತಂದೊಡ್ಡಿತ್ತು. ಇದರಿಂದ ಮೂಗುಮುರಿದುಕೊಂಡ ಉದಾರವಾದಿ ಮುಖಂಡರು ತಮ್ಮ ವರ್ಚಸ್ಸನ್ನು ಪುನಃ ಸ್ಥಾಪಿಸಲು ಪ್ರಯತ್ನಿಸುತ್ತಿದ್ದರು. ಮುಂದಿನ ಹೋರಾಟಕ್ಕೆ ಅವರು ಅಂದಿನಿಂದಲೇ ಸಿದ್ಧತೆಗಳನ್ನು ಮಾಡ ತೊಡಗಿದರು.

ಮುಂದಿನ ವರ್ಷದ ಕಾಂಗ್ರೆಸ್ ಅಧಿವೇಶನವನ್ನು ಲಾಹೋರಿನಲ್ಲಿ ಜರಗಿಸುವಂತೆ ಲಾಲಾ ಲಜಪತರೈ ಆಮಂತ್ರಣ ಕೊಟ್ಟಿದ್ದರು. ಸರ್ ಫಿರೋಜ ಷಾ ಮೆಹತಾ ಇದರಲ್ಲಿ ಗಂಡಾಂತರವನ್ನು ಕಂಡುಕೊಂಡು, ತಮ್ಮ ಪಕ್ಷಕ್ಕೆ ಸುರಕ್ಷಿತವಾದ ನಾಗಪುರನನ್ನು ಆರಿಸುವಂತೆ ಮಾಡಿದರು. ಆದರೆ ನಾಗಪುರವೂ ಅವರಿಗೆ ಎದುರು ನಿಲ್ಲಬೇಕೆ !

ಕಾಂಗ್ರೆಸಿನ ಆಗಿನ ಘಟನೆಯಂತೆ ಅಧಿವೇಶನಕ್ಕೆ ಅಧ್ಯಕ್ಷರನ್ನು ನೇಮಕಮಾಡುವ ಕೆಲಸ ಸ್ವಾಗತ ಸಮಿತಿಗೆ ಸೇರಿದ್ದು. ಮೂರನೆಯ ನಾಲ್ಕರ ಬಹುಮತದಿಂದ ಅಧ್ಯಕ್ಷರ ಆಯ್ಕೆಯಾಗಬೇಕು. ಆದುದರಿಂದ ನಾಗಪುರದ ಸ್ವಾಗತಸಮಿತಿಗೆ ಎರಡು ಪಕ್ಷದವರೂ ಸದಸ್ಯರನ್ನು ಸೇರಿಸಲು ಪ್ರಾರಂಭಿಸಿದರು. ಉದಾರವಾದಿ ಪಕ್ಷಕ್ಕೆ 800 ಸದಸ್ಯರೂ ರಾಷ್ಟ್ರೀಯವಾದಿ ಪಕ್ಷಕ್ಕೆ 1800 ಸದಸ್ಯರೂ ದೊರಕಿದರು. ರಾಷ್ಟ್ರೀಯವಾದಿಗಳಿಗೆ ತಿಲಕರನ್ನು ಅಧ್ಯಕ್ಷರಾಗಿ ನೇಮಿಸಬೇಕೆಂದಿತ್ತು. ಆದರೆ 1800 ಸದಸ್ಯರ ಬೆಂಬಲದಿಂದ ಅದು ಸಾಧ್ಯವಿಲ್ಲ. ಇದನ್ನು ನೋಡಿ ರಾಷ್ಟ್ರೀಯವಾದಿಗಳು ತಮ್ಮ ಪಕ್ಷದ 1800 ಮಂದಿಯ ಹೆಸರನ್ನು ಮತ್ತು ಅವರ ಸದಸ್ಯತನದ ವಂತಿಗೆಯನ್ನು ಸ್ವಾಗತಸಮಿತಿಗೆ ಕೊಡದೆ ಬರೇ 26

ಮುಂದಿಯ ಹೆಸರನ್ನು ಮಾತ್ರ ಕೊಟ್ಟರು. ಎರಡು ಪಕ್ಷಗಳೊಳಗೆ ಸಂಧಾನ ಮಾಡುವ ಪ್ರಯತ್ನ ಪ್ರಯೋಜನ ಕೊಡಲಿಲ್ಲ. ರಾಷ್ಟ್ರೀಯವಾದಿಗಳು ತಾವು ಅಧಿವೇಶನವನ್ನು ಜರಗಿಸುವುದಾಗಿ ಆಹ್ವಾನಕೊಟ್ಟರು. ಅದಕ್ಕೆ ಉದಾರವಾದಿಗಳು ಒಪ್ಪುವಂತಿಲ್ಲ. ರಾಷ್ಟ್ರೀಯವಾದಿಗಳನ್ನು ಬಿಟ್ಟು ತಾವೇ ಜರಗಿಸುವ ಧೈರ್ಯವೂ ಇಲ್ಲ. ಆದುದರಿಂದ ಅವರು ನಾಗಪುರದಲ್ಲಿ ಕಾಂಗ್ರೆಸ್ ಅಧಿವೇಶನವನ್ನು ಜರಗಿಸುವುದು ಸಾಧ್ಯವಿಲ್ಲವೆಂದು ಅಖಿಲ ಭಾರತ ಕಾಂಗ್ರೆಸ್ ಸಮಿತಿಗೆ ವರದಿ ಮಾಡಿದರು. ಮುಂಬಯಿಯಲ್ಲಿ ಜರಗಿದ ಅಖಿಲ ಭಾರತ ಕಾಂಗ್ರೆಸ್ ಸಮಿತಿ ತಿಲಕರು ಮತ್ತು ಅವರ ಅನುಯಾಯಿಗಳ ಪ್ರತಿಭಟನೆಯನ್ನು ಲೆಕ್ಕಿಸದೆಯೂ ಅಧಿವೇಶನವನ್ನು ಸೂರತ್‌ನಲ್ಲಿ ಜರಗಿಸುವ ನಿರ್ಧಾರ ಮಾಡಿತು. ಸೂರತ್ ಉದಾರ ವಾದಿಗಳ ಪ್ರಬಲ ಕೇಂದ್ರ.

ಸೂರತ್‌ನಲ್ಲಿಯೂ ಅಧ್ಯಕ್ಷರ ನೇಮಕದಿಂದಲೇ ಘರ್ಷಣೆಗೆ ಪ್ರಾರಂಭವಾಯಿತು. ಅಧ್ಯಕ್ಷರನ್ನು ನೇಮಕಮಾಡುವ ದಿನ ಸ್ವಾಗತ ಸಮಿತಿಯ ಸಭೆಗೆ ಮಹಾರಾಷ್ಟ್ರದಿಂದ ಅನೇಕರು ಕಾಂಗ್ರೆಸಿಗರಿಗೆ ಬರ ಲಾಗಲಿಲ್ಲ ಅವರಲ್ಲಿ ಹೆಚ್ಚಿನವರು ರಾಷ್ಟ್ರೀಯವಾದಿಗಳು. ಆದರೂ ಬಂದಿದ್ದ ರಾಷ್ಟ್ರೀಯವಾದಿಗಳು ಲಾಲಾ ಲಜಪತ ರೈಯವರ ಹೆಸರನ್ನು ಅಧ್ಯಕ್ಷಪದಕ್ಕೆ ಸೂಚಿಸಿದರು ಲಜಪತ ರೈಯವರು ಆಗಷ್ಟೇ ಗಡೀಪಾರು ಶಿಕ್ಷೆಯನ್ನು ಅನುಭವಿಸಿ ದೇಶಕ್ಕೆ ಹಿಂದಿರುಗಿದ್ದರು. ಅವರ ಹೆಸರು ಇನ್ನೂ ಜನರ ಮನಸ್ಸಿನಲ್ಲಿ ಹಚ್ಚಹಸುರಾಗಿತ್ತು. ಆದರೂ ಉದಾರ ವಾದಿಗಳಿಂದಲೇ ತುಂಬಿದ್ದ ಸ್ವಾಗತಸಮಿತಿಯಲ್ಲಿ ಅವರ ಚುನಾವಣೆ ಬರೇ ಕನಸು. ಉದಾರವಾದಿ ಮುಖಂಡ ಗೋಪಾಲಕೃಷ್ಣ ಗೋಖಲೆಯವರು ಲಜಪತ ರೈಯವರ ಹೆಸರನ್ನು ಹಿಂತೆಗೆದುಕೊಳ್ಳುವಂತೆ ವಿನಂತಿಸಿದರು; ಪ್ರಾರ್ಥಿಸಿದರು; ಒತ್ತಾಯಿಸಿದರು. ಎಲ್ಲವೂ ವಿಫಲವಾದಾಗ ಚುನಾವಣೆ ನಡೆದೇ ನಡೆಯಲಿ ಎಂದು ಆಹ್ವಾನವಿತ್ತರು. ರಾಷ್ಟ್ರೀಯವಾದಿಗಳು ಲಜಪತ ರೈಯವರ ಗೌರವವನ್ನು ಉಳಿಸುವ ದೃಷ್ಟಿಯಿಂದ ಅವರ ಹೆಸ ರನ್ನು ಹಿಂತೆಗೆಯಬೇಕಾಯಿತು. ಉದಾರವಾದಿ ಉಮೇದ್ವಾರ ರಾಷ್ ಬಿಹಾರಿ ಘೋಷರು ಅವಿರೋಧವಾಗಿ ಆರಿಸಲ್ಪಟ್ಟರು.

ಉದಾರವಾದಿಗಳು ಸೂರತ್ ಅಧಿವೇಶನದಲ್ಲಿ ಕಲ್ಕತ್ತಾ ನಿರ್ಣಯ

ಗಳನ್ನು ಮೂಲೆಗೊತ್ತುವರೆಂದು ಆಗಲೇ ಗುಜುಗುಜು ಸುದ್ದಿ ಹರಡಿತ್ತು. ಅಧಿವೇಶನಕ್ಕೆ ಹತ್ತು ದಿನಗಳ ಮೊದಲು ಸೂರತ್‌ನಲ್ಲಿ ಚರ್ಚೆಗೆ ತೆಗೆದು ಕೊಳ್ಳಬಹುದಾದ ವಿಷಯುಗಳೆಂದು ಅಧಿಕೃತವಾಗಿ ಪ್ರಸಿದ್ಧಿಸಲ್ಪಟ್ಟ ವಿಷಯು ಗಳಲ್ಲಿ ಕಲ್ಕತ್ತಾ ನಿರ್ಣಯುಗಳ ಸುದ್ದಿಯೇ ಇರಲಿಲ್ಲ. ಅಲ್ಲದೆ ಕೊನೆಯು ಗಳಿಗೆಯು ವರೆಗೂ ರಾಷ್ಟ್ರೀಯುವಾದಿಗಳಿಗೆ ಅಧಿವೇಶನದಲ್ಲಿ ಚರ್ಚೆಗೆ ಬರ ಲಿರುವ ನಿರ್ಣಯುಗಳ ಕರಡು ಪ್ರತಿಯೇ ಸಿಕ್ಕಿರಲಿಲ್ಲ ಇದರಿಂದ ಅವರಿಗೆ ಉದಾರವಾದಿಗಳ ಮೇಲೆ ಸಂಶಯ ಬರುವುದು ಸಹಜ. ಕಲ್ಕತ್ತಾ ಅಧಿ ವೇಶನದಲ್ಲಿ ಸ್ವೀಕೃತವಾದ-ಸ್ವರಾಜ್ಯ, ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯು ಶಿಕ್ಷಣ ಗೊತ್ತುವಳಿಗಳು ರಾಷ್ಟ್ರೀಯುವಾದಿಗಳಿಗೆ ಪ್ರತಿಷ್ಠೆಯು ಪ್ರಶ್ನೆ ಮಾತ್ರ ವಾಗಿತ್ತಲ್ಲದೆ ಅವರ ಪಕ್ಷದ ಅಸ್ತಿತ್ವದ ಮೂಲಭೂತ ಧೋರಣೆಯೂ ಆಗಿತ್ತು. ಆದುದರಿಂದ ಈ ನಿರ್ಣಯುಗಳಿಂದ ಹಿಮ್ಮೆಟ್ಟುವುದು ಅವರ ಗೋಚರಕ್ಕೂ ಸಿಲುಕದ ವಿಚಾರ.

ಲೋಕಮಾನ್ಯ ತಿಲಕರು ಸೂರತ್‌ಗೆ ಬಂದವರೇ ಸಾರ್ವಜನಿಕ ಸಭೆಯೊಂದರಲ್ಲಿ ಭಾಷಣಮಾಡುತ್ತ, ಅಂದಿನ ಪರಿಸ್ಥಿತಿಯುಲ್ಲಿ ಕಲ್ಕತ್ತಾ ನಿರ್ಣಯುಗಳಿಂದ ಹಿಮ್ಮೆಟ್ಟುವುದು ಆತ್ಮಹತ್ಯೆ ಮಾಡಿಕೊಂಡಂತೆ ಎಂದು ಹೇಳಿ, ಈ ವಿಷಯುದಲ್ಲಿ ಕಲ್ಕತ್ತದ ನಿಲುಮೆಯುನ್ನಾದರೂ ಉಳಿಸಿಕೊಳ್ಳು ವುದಕ್ಕೆ ರಾಷ್ಟ್ರೀಯುವಾದಿಗಳಿಗೆ ನೆರವಾಗಬೇಕೆಂದು ಸೂರತ್‌ನ ಜನತೆಗೆ ವಿನಂತಿಸಿಕೊಂಡರು. ಮರುದಿನ ರಾಷ್ಟ್ರೀಯುವಾದಿ ಪ್ರತಿನಿಧಿಗಳ ಸಭೆ ಯೊಂದು ಅರವಿಂದ ಘೋಷರ ಅಧ್ಯಕ್ಷತೆಯುಲ್ಲಿ ಜರಗಿ, ಕಲ್ಕತ್ತಾ ನಿರ್ಣ ಯುಗಳಿಂದ ಹಿಮ್ಮೆಟ್ಟುವ ಉದಾರವಾದಿಗಳ ಪ್ರಯುತ್ನವನ್ನು — ಅವಶ್ಯ ಬಿದ್ದರೆ ಅಧ್ಯಕ್ಷರ ಚುನಾವಣೆಯುನ್ನು ಕೂಡ – ಎಲ್ಲ ಘಟನಾತ್ಮಕ ವಿಧಾನ ಗಳಿಂದಲೂ ವಿರೋಧಿಸಬೇಕು ಎಂದು ನಿರ್ಣಯುವಾಯಿತು.

ಉದಾರವಾದಿಗಳೊಡನೆ ಸಂಧಾನಕ್ಕೆ ಬರುವ ತಿಲಕರ ಮತ್ತು ಲಜ ಪತ ರೈಯುವರ ಪ್ರಯುತ್ನ ಸಫಲವಾಗಲಿಲ್ಲ. ಸ್ವಾಗತಸಮಿತಿಯು ಅಧ್ಯಕ್ಷ ತ್ರಿಭುವನದಾಸ ಮಾಲ್ವಿಯುವರ ಭೆಟ್ಟಿ ಕೂಡ ಅವರಿಗೆ ದೊರಕಲಿಲ್ಲ ಕೊನೆಗೆ ಅವರು ಅಧ್ಯಕ್ಷರ ಚುನಾವಣೆಯುನ್ನೇ ವಿರೋಧಿಸುವ ನಿರ್ಧಾರ ಮಾಡಿದರು.

ಆಗಿನ ಕಾಲದಲ್ಲಿ ಕಾಂಗ್ರೆಸ್ ಅಧ್ಯಕ್ಷರ ಚುನಾವಣೆಯು ಕ್ರಮ

ಬೇರೆಯಾಗಿತ್ತು. ಉದಾರವಾದಿಗಳ ಹೇಳಿಕೆಯಂತೆ ಆ ಕೆಲಸ ಪೂರ್ಣ ಸ್ವಾಗತಸಮಿತಿಗೆ ಸೇರಿದ್ದು. ಅಧಿವೇಶನದಲ್ಲಿ ಅಧ್ಯಕ್ಷರ ಸೂಚನೆ ಔಪಚಾರಿಕವಾಗಿ ನಡೆಯುವುದಲ್ಲದೆ ಅದನ್ನು ವಿರೋಧಿಸುವ ಅಧಿಕಾರ ಪ್ರತಿನಿಧಿಗಳಿಗಿಲ್ಲ. ಆದರೆ ಈ ನಿಲುವೆಯನ್ನು ರಾಷ್ಟ್ರೀಯವಾದಿಗಳು ಒಪ್ಪುವ ಹಾಗಿಲ್ಲ.

ದಶಂಬರ 27ರಂದು ಅಧಿವೇಶನ ಪ್ರಾರಂಭವಾಯಿತು. ಸುಮಾರು 1600 ಪ್ರತಿನಿಧಿಗಳು ನೆರೆದಿದ್ದರು. ಸ್ವಾಗತಸಮಿತಿಯ ಅಧ್ಯಕ್ಷರು ತಮ್ಮ ಸ್ವಾಗತಭಾಷಣವನ್ನು ಓದಿದ ಮೇಲೆ ಡಾ| ಘೋಷರ ಹೆಸರು ಅಧ್ಯಕ್ಷಸ್ಥಾನಕ್ಕೆ ಸೂಚಿತವಾಯಿತು. ಬಾಬೂ ಸುರೇಂದ್ರನಾಥ ಬ್ಯಾನರ್ಜಿ ಎಂಬವರು ಸೂಚನೆಯನ್ನು ಅನುಮೋದಿಸಲು ಎದ್ದುನಿಂತರು. ಬ್ಯಾನರ್ಜಿಯವರು ಬಂಗಾಳದ ಪ್ರಸಿದ್ಧ ಉದಾರವಾದಿ ಮುಖಂಡರು. ಸ್ವಲ್ಪ ಸಮಯದ ಹಿಂದೆ ಮಿದ್ನಾಪುರದಲ್ಲಿ ಜರಗಿದ ಪ್ರಾಂತೀಯ ಪರಿಷತ್ತಿನಲ್ಲಿ ಅರವಿಂದ ಘೋಷರ ಮುಖಂಡತ್ವದಲ್ಲಿದ್ದ ರಾಷ್ಟ್ರೀಯವಾದಿಗಳನ್ನು ಅವರು ಪೊಲೀಸರ ಸಹಾಯದಿಂದ ಹೊರಗಟ್ಟಿದ ಘಟನೆ ರಾಷ್ಟ್ರೀಯವಾದಿಗಳ ಮನಸ್ಸಿನಿಂದ ಇನ್ನೂ ಮಾಸಿರಲಿಲ್ಲ. ಅವರು ಭಾಷಣಮಾಡಲು ಎದ್ದು ನಿಂತೊಡನೆಯೇ ಸಭೆಯಲ್ಲಿ ಗದ್ದಲ ಪ್ರಾರಂಭವಾಯಿತು. ವಿರೋಧಿ ಘೋಷಣೆಗಳು ಎದ್ದುವು; ಕುಳಿತುಕೊಳ್ಳುವಂತೆ ಜನ ಕೂಗತೊಡಗಿದರು. ಭಾಷಣವನ್ನು ಮುಂದುವರಿಸುವುದೇ ಆಗಲಿಲ್ಲ. ಇದರಿಂದಾಗಿ ಅಂದಿನ ಅಧಿವೇಶನವನ್ನು ಅಷ್ಟರಲ್ಲೇ ಕೊನೆಗೊಳಿಸಬೇಕಾಯಿತು.

ಮರುದಿನ ಅಧಿವೇಶನ ಪುನಃ ಸೇರಿತು. ಅಧ್ಯಕ್ಷರ ಮೆರವಣಿಗೆ ಹೋಗುತ್ತಿದ್ದಾಗ ತಿಲಕರು ಸ್ವಾಗತಾಧ್ಯಕ್ಷ ಮಾಳ್ವಿಯವರಿಗೆ "ಅಧ್ಯಕ್ಷರ ಅನುಮೋದನೆಯಾದ ಅನಂತರ ನನಗೆ ಆಯ್ಕೆಯ ವಿಷಯದಲ್ಲಿ ಪ್ರತಿನಿಧಿಗಳನ್ನುದ್ದೇಶಿಸಿ ಮಾತನಾಡುವ ಇಚ್ಛೆಯಿದೆ. ಅಲ್ಲದೆ ನಿಲುವಳಿ ಸೂಚನೆಯೊಂದನ್ನು ಮಂಡಿಸುವ ಅಭಿಪ್ರಾಯವೂ ಇದೆ. ಆದುದರಿಂದ ನನ್ನ ಹೆಸರನ್ನು ಕಾರ್ಯಕ್ರಮದಲ್ಲಿ ಸೇರಿಸಿರಿ" ಎಂದು ಬರೆಹದ ಮೂಲಕ ಮಾತು ಕಳುಹಿಸಿದರು. ಆದರೆ ಅದಕ್ಕೆ ಮಾಳ್ವಿಯವರಿಂದ ಯಾವ ಉತ್ತರವೂ ಬರಲಿಲ್ಲ.

ಸುರೇಂದ್ರನಾಥ ಬ್ಯಾನರ್ಜಿಯವರ ಭಾಷಣದೊಡನೆ ಅಧಿವೇಶನ

ಪ್ರಾರಂಭವಾಯಿತು. ಪ್ರತಿನಿಧಿಗಳು ಅದನ್ನು ಮೌನವಾಗಿ ಕೇಳಿದರು. ಅವರ ಭಾಷಣ ಮುಗಿಯಿತೆನ್ನುವಾಗ ತಿಲಕರು ಎದ್ದು ವೇದಿಕೆಯ ಮೇಲೆ ಹೋದರು. ಸ್ವಯಂ ಸೇವಕನೊಬ್ಬ ಅವರನ್ನು ತಡೆಯಲು ಪ್ರಯತ್ನಿಸಿದ. ತಿಲಕರು ತಮಗೆ ವೇದಿಕೆಯ ಮೇಲೆ ಹೋಗುವ ಅಧಿಕಾರವಿದೆಯೆಂದು ಹೇಳಿ ಹೇಗೂ ವೇದಿಕೆಯನ್ನು ಸೇರಿದರು. ಅಷ್ಟರಲ್ಲೇ ಡಾ। ಘೋಷರು ಅಧ್ಯಕ್ಷಪೀಠವನ್ನೇರುವವರಿದ್ದರು. ತಿಲಕರು ವೇದಿಕೆಯ ಮೇಲೆ ನಿಂತೊಡನೆಯೇ ಅಲ್ಲೇ ಇದ್ದ ಸ್ವಾಗತಸಮಿತಿಯ ಸದಸ್ಯರು ವಿರೋಧ ವ್ಯಕ್ತಪಡಿಸಿದರು ಅವರನ್ನನುಸರಿಸಿ ಇತರ ಉದಾರವಾದಿ ಪ್ರತಿನಿಧಿಗಳೂ ಗದ್ದಲಕ್ಕೆ ಪ್ರಾರಂಭಿಸಿದರು. ತಿಲಕರು ತಮಗೆ ಪ್ರತಿನಿಧಿಗಳನ್ನುದ್ದೇಶಿಸಿ ಭಾಷಣಮಾಡುವ ಅಧಿಕಾರವಿದೆ ಎಂದು ವಾದಿಸಿದರು. ಇಷ್ಟರಲ್ಲಿ ಸಭೆಯಲ್ಲಿ ಘೋಷಣೆ ಪ್ರತಿಘೋಷಣೆಗಳ ದೊಡ್ಡ ಕೋಲಾಹಲವೇ ಎದ್ದಿತ್ತು. ಅಧ್ಯಕ್ಷ ಘೋಷ್ ಮತ್ತು ಸ್ವಾಗತಾಧ್ಯಕ್ಷ ಮಾಲ್ವಿ ತಿಲಕರನ್ನು ವೇದಿಕೆಯಿಂದ ಒಯ್ಯಬೇಕೆಂದು ಹೇಳಿದರು. ಆದರಂತೆ ಸ್ವಾಗತಸಮಿತಿಯ ಪ್ರಮುಖ ಸದಸ್ಯರೊಬ್ಬರು ಅವರನ್ನೊಯ್ಯುವ ಉದ್ದೇಶದಿಂದ ತಿಲಕರ ಮೇಲೆ ಕೈಹಾಕಿದಾಗ ತಿಲಕರು ಅವರನ್ನು ತಳ್ಳಿ, ತಮಗೆ ಭಾಷಣ ಮಾಡುವ ಅಧಿಕಾರವಿದೆ; ಎತ್ತಿಕೊಂಡೇ ಹೋದ ಹೊರತು ತಾನು ವೇದಿಕೆಯನ್ನು ಬಿಡುವಂತಿಲ್ಲ ಎಂದು ಸ್ಪಷ್ಟವಾಗಿ ಹೇಳಿದರು. ಈ ಗದ್ದಲದ ನಡುವೆ ಸಭೆಯಿಂದ ಯಾರೋ ಎಸೆದ ಚಪ್ಪಲಿಯೊಂದು ತಿಲಕರ ಹತ್ತಿರವೇ ಕುಳಿತಿದ್ದ ಸುರೇಂದ್ರನಾಥ ಬ್ಯಾನರ್ಜಿಯವರನ್ನು ಒರಸಿಕೊಂಡು ಫಿರೋಜ ಷಾ ಮೆಹತಾರ ಮೇಲೆ ಹೋಗಿ ಬಿತ್ತು. ಗಲಭೆ ಇನ್ನೂ ಹೆಚ್ಚಿತು. ಉದಾರವಾದಿ ಪ್ರತಿನಿಧಿಗಳು ಕೆಲವರು ತಿಲಕರ ಮೇಲೆಸೆಯಲು ಮೇಜುಕುರ್ಚಿಗಳನ್ನೆತ್ತಿದರು. ಇದನ್ನು ನೋಡಿ ಅವರ ರಕ್ಷಣೆಗೆ ಕೆಲವರು ರಾಷ್ಟ್ರೀಯವಾದಿಗಳು ವೇದಿಕೆಯ ಮೇಲೆ ಬಂದರು. ಇಷ್ಟೆಲ್ಲ ಗಲಭೆ-ಗಲಾಟೆಗಳಾಗುತ್ತಿದ್ದರೂ ತಿಲಕರು ಕೈಕಟ್ಟಿ ಸಮಾಧಾನದಿಂದಲೇ ಕದಲದೆ ನಿಂತಿದ್ದರು.

ಈ ಮಧ್ಯೆ ಡಾ। ಘೋಷರು ತಮ್ಮ ಅಧ್ಯಕ್ಷಭಾಷಣವನ್ನು ಓದಲು ಪ್ರಯತ್ನಿಸಿದಾಗ 'ಬೇಡ, ಬೇಡ' ಎಂಬ ಕೂಗು ನಾಲ್ಕು ಕಡೆಗಳಿಂದಲೂ ಕೇಳಿಬಂತು. ಗಲಭೆಯನ್ನು ನಿಲ್ಲಿಸುವುದೇ ಅಸಾಧ್ಯವಾಯಿತು. ಆಮೇಲೆ

ರಿಂದ ಕಾರ್ಯಕಲಾಪಗಳನ್ನು ಅನಿಶ್ಚಿತ ಅವಧಿಯ ವರೆಗೆ ಮುಂದುವರಿಸ ಬೇಕಾಯಿತು.

ಡಾ| ಘೋಷರು ತಮ್ಮ ಭಾಷಣವನ್ನು ಓದಿಲ್ಲವಾಗಿದ್ದರೂ ಆಗಲೇ ಅದರ ಮುಖ್ಯಾಂಶಗಳು ಕಲ್ಕತ್ತದ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಭಾಷಣದಲ್ಲಿ ಅವರು ರಾಷ್ಟ್ರೀಯವಾದಿಗಳನ್ನು ತೀವ್ರವಾಗಿ ಟೀಕಿಸಿದ್ದರು. ಇದನ್ನು ಓದಿ ರಾಷ್ಟ್ರೀಯವಾದಿಗಳು ಇನ್ನೂ ರೊಚ್ಚಿಗೆದ್ದರು. ಆದರೂ ಸಂಧಾನದ ಆಸೆ ಇನ್ನೂ ಹೋಗಿರಲಿಲ್ಲ. ಕೆಲವರು ಮಧ್ಯಸ್ಥರು ಎರಡು ಪಕ್ಷಗಳೊಳಗೆ ಒಮ್ಮತವನ್ನುಂಟುಮಾಡಿ ಮರುದಿನ ಅಧಿವೇಶನ ಮುಂದು ವರಿಸುವ ಪ್ರಯತ್ನ ಮಾಡಿದರು. ತಿಲಕರು ಕಾಂಗ್ರೆಸಿನ ಮತ್ತು ದೇಶದ ಹಿತದೃಷ್ಟಿಯಿಂದ ಸಂಧಾನಕ್ಕೆ ತಯಾರಾಗಿಯೇ ಇದ್ದರು. ಕಲ್ಕತ್ತಾ ಅಧಿವೇಶನದಲ್ಲಿ ಸ್ವೀಕಾರವಾಗಿದ್ದ ಸ್ವರಾಜ್ಯ, ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ— ಈ ವಿಷಯಗಳಿಗೆ ಸಂಬಂಧಿಸಿದ ನಿರ್ಣಯಗಳನ್ನು ಸೂರತ್ ಅಧಿವೇಶನ ಪುನರುಚ್ಚರಿಸಬೇಕು; ಡಾ| ಘೋಷರು ತಮ್ಮ ಭಾಷಣದಲ್ಲಿ ರಾಷ್ಟ್ರೀಯವಾದಿಗಳ ಮೇಲೆ ಮಾಡಿದ ಟೀಕೆಗಳನ್ನು ಹಿಂತೆಗೆದುಕೊಳ್ಳಬೇಕು; ಹಾಗಿದ್ದರೆ ಎಲ್ಲವನ್ನೂ ಮರೆತು ಅಧ್ಯಕ್ಷ ಚುನಾ ವಣೆಗಿದ್ದ ವಿರೋಧವನ್ನು ಹಿಂತೆಗೆದುಕೊಳ್ಳಲಾಗುವುದು— ಎಂದು ಅವರು ಹೇಳಿದರು.

ಆದರೆ ಇದಕ್ಕೆ ಉದಾರವಾದಿಗಳು ಸಿದ್ಧರಿರಲಿಲ್ಲ. ಅವರು ಪ್ರತ್ಯೇಕ ವಾಗಿ ಸಭೆಸೇರಿ ಕಾಂಗ್ರೆಸಿನ ಹೊಸ ಘಟನೆಯೊಂದನ್ನು ಸ್ವೀಕರಿಸಿದರು. ಈ ಘಟನೆಯಂತೆ ರಾಷ್ಟ್ರೀಯವಾದಿಗಳು ಕಾಂಗ್ರೆಸಿಗೆ ಪ್ರವೇಶಿಸುವುದು ಸಾಧ್ಯವಿರಲಿಲ್ಲ. ಹೀಗೆ ಅವರು ರಾಷ್ಟ್ರೀಯವಾದಿಗಳನ್ನು ಕಾಂಗ್ರೆಸಿನಿಂದ ಹೊರಗಿರಿಸುವ ಕೆಲಸದಲ್ಲಿ ಸಫಲರಾದರು. ಇದೇ ಸಮಯದಲ್ಲಿ ರಾಷ್ಟ್ರೀ ಯವಾದಿಗಳು ಇನ್ನೊಂಡೆಡೆ ಪ್ರತ್ಯೇಕ ಸಭೆಸೇರಿ ತಮ್ಮ ಮುಂದಿನ ಕಾರ್ಯ ಕ್ರಮಗಳನ್ನು ಚರ್ಚಿಸುತ್ತಿದ್ದರು.

ಸೂರತ್ ಅಧಿವೇಶನ ಕಾಂಗ್ರೆಸಿನ ಒಡಕಿನಲ್ಲಿ ಕೊನೆಗೊಂಡಿತು. ತಿಲಕರು ಮತ್ತು ಅವರ ಅನುಯಾಯಿಗಳು ಹಲವು ವರ್ಷಗಳ ವರೆಗೆ ಕಾಂಗ್ರೆಸಿನೊಡನೆ ಸಹಕರಿಸದೆ ಪ್ರತ್ಯೇಕವಾಗಿಯೇ ಉಳಿದರು. ಮುಂದೆ ಅವರು ಕಾಂಗ್ರೆಸಿನಲ್ಲಿ ಸೇರಿದುದು 1916 ರಲ್ಲಿ. ಅಷ್ಟರಲ್ಲಿ ಗೋಖಲೆ,

ಮೆಹತಾ ಮೊದಲಾದ ಉದಾರವಾದಿ ಪಕ್ಷದ ಅಗ್ರನಾಯಕರು ನಿಧನ ಹೊಂದಿದ್ದರು. ಉದಾರವಾದಿ ಪಕ್ಷದ ಅವನತಿಗೆ ಪ್ರಾರಂಭವಾಗಿತ್ತು. ಗಾಂಧಿಜಿ ಭಾರತದ ರಾಜಕೀಯದಲ್ಲಿ ಕಾಲಿಟ್ಟಿದ್ದರು.

---

# ೯

# ಮಾಂಡಲೆಗೆ ಗಡಿಪಾರು

ಹಿಂಸೆ ಹಿಂಸೆಯನ್ನು ಪ್ರಚೋದಿಸುತ್ತದೆ. ದಬ್ಬಾಳಿಕೆ, ಮರ್ದನಗಳು ಜನತೆಯಲ್ಲಿ ಪ್ರತಿರೋಧವನ್ನು ಹುಟ್ಟಿಸುತ್ತವೆ.

ಬಂಗಾಳದ ವಿಭಜನೆಯ ಅನಂತರ ದೇಶದಾದ್ಯಂತ ನಡೆದ ಚಳವಳವನ್ನಡಗಿಸಲು ಸರಕಾರ ಉಗ್ರ ಕ್ರಮಗಳನ್ನು ಕೈಗೊಂಡಿತ್ತು. ಲಾಠಿ ಪ್ರಯೋಗ, ಬಂಧನ, ಗಡಿಪಾರುಗಳು ದಿನನಿತ್ಯದ ಮಾತುಗಳಾಗಿದ್ದುವು. ರಾಷ್ಟ್ರೀಯ ಪತ್ರಿಕೆಗಳ ಮೇಲೆಲ್ಲ ಸರಕಾರ ಯುದ್ಧ ಸಾರಿತ್ತು. ಬಂಗಾಳದ ಪ್ರಸಿದ್ಧ ಪತ್ರಿಕೆಗಳಾದ ಯುಗಾಂತರ, ಸಂಧ್ಯಾ, ವಂದೇಮಾತರಂ ಸರ್ವಾಧಿಕಾರ ಪತ್ರಿಕಾಶಾಸನಗಳಿಗೆ ಬಲಿಯಾಗಿದ್ದುವು. ಸಂಧ್ಯಾದ ಸಂಪಾದಕರಾದ ಬ್ರಹ್ಮಬಾಂಧವ ಉಪಾಧ್ಯಾಯರು ಸೆರೆಮನೆಯಲ್ಲೇ ಸಾವು ಕಂಡಿದ್ದರು. ವಂದೇಮಾತರಂ ಸಂಪಾದಕ ಅರವಿಂದ ಘೋಷರು ಹಲವಾರು ಸಂಕಷ್ಟಗಳನ್ನು ಎದುರಿಸಿ, ಪಾಂಡಿಚೇರಿಯಲ್ಲಿ ಹೋಗಿ ಆಶ್ರಮ ಸ್ಥಾಪಿಸಿದ್ದರು.

ನೌಕರಶಾಹಿಯ ದಬ್ಬಾಳಿಕೆಗೆ ಪ್ರತಿಯಾಗಿ ಸರಕಾರವನ್ನು ಹಿಂಸೆಯಿಂದ ಉರುಳಿಸುವ ಗುರಿಯನ್ನಿಟ್ಟುಕೊಂಡ ತರುಣರ ಗುಂಪೊಂದು ಬಂಗಾಳದಲ್ಲಿ ಹುಟ್ಟಿಕೊಂಡಿತ್ತು. ಬಾಂಬಿನ ಆರಾಧಕರಾದ ಈ ತರುಣರು ಹಿಂಸೆಯನ್ನು ಬಹಿರಂಗವಾಗಿಯೇ ಸಾರುತ್ತಿದ್ದರು. ದಬ್ಬಾಳಿಕೆಗೆ ಹೆದರದ ಅವರು ದೇಶಕ್ಕಾಗಿ ಯಾವ ತ್ಯಾಗಕ್ಕೂ ಸಿದ್ಧರಿದ್ದರು. ಯುಗಾಂತರದ ಸಂಪಾದಕರಾದ ಭೂಪೇಂದ್ರನಾಥ ದತ್ತರಿಗೆ ದೀರ್ಘ ಸಜೆ ವಿಧಿಸಲ್ಪಟ್ಟಾಗ

ಅವರು ತನ್ನ ಹಿಂದಿನಿಂದ ಪತ್ರಿಕೆಯ ಸಂಪಾದಕತ್ವ ವಹಿಸಲು 300 ಮಿಲಿಯ ಜನರಿದ್ದಾರೆ ಎಂದು ನ್ಯಾಯಾಲಯದಲ್ಲಿ ಹೇಳಿದ್ದರು; ಅವರ ತಾಯಿ ತನ್ನ ಪುತ್ರ ದೇಶಕ್ಕಾಗಿ ಇಷ್ಟಾದರೂ ಸೇವೆ ಸಲ್ಲಿಸಿದನಲ್ಲ ಎಂದು ಸಂತೋಷ ವ್ಯಕ್ತಪಡಿಸಿದ್ದರು; ಐನೂರು ಮಂದಿ ಬಂಗಾಳಿ ಹೆಣ್ಣು ಮಕ್ಕಳು ಆ ತಾಯಿಯನ್ನು ಆಕೆಯ ಪುತ್ರನ ಧೈರ್ಯ-ಸಾಹಸಗಳಿಗಾಗಿ ಅಭಿನಂದಿಸಿದ್ದರು. ಇದು ಬಂಗಾಳದಲ್ಲಿ ಹುಟ್ಟಿಕೊಂಡ ಹೊಸ ರಕ್ತದ ಹೊಸ ಶಕ್ತಿ.

ಮುಜಾಫರಪುರದಲ್ಲಿ ಇಬ್ಬರು ಬ್ರಿಟಿಷ್ ಹೆಣ್ಣುಮಕ್ಕಳನ್ನು ಬಲಿ ತೆಗೆದುಕೊಂಡುದೂ ಈ ಹೊಸ ಶಕ್ತಿಯೇ. ಜಿಲ್ಲಾ ನ್ಯಾಯಾಧೀಶ ಕಿಂಗ್ಸ್‌ಫೋರ್ಡ್ ಎಂಬವರಿಗಾಗಿ ಇದ್ದ ಬಾಂಬು ಆ ಹೆಣ್ಣುಮಕ್ಕಳ ಪ್ರಾಣಗಳನ್ನು ಅಪಹರಿಸಿತ್ತು. ಅದಕ್ಕಾಗಿ ಖುದಿರಾಮ ಬೋಸ ಎಂಬ ಹದಿನೆಂಟು ವರ್ಷ ಪ್ರಾಯದ ತರುಣ ಗಲ್ಲನ್ನು ಕಂಡಿದ್ದ.

ಮುಜಾಫರಪುರ ಘಟನೆಯ ಅನಂತರ ಸರಕಾರದ ಮರ್ದನ ನೀತಿ ತೀವ್ರವಾಯಿತು. ಬಂಗಾಳದಿಂದ ಅದು ಇತರ ಕಡೆಗಳಿಗೂ ಹರಡಿತು. ಇದರ ಪರಿಣಾಮ ಲೋಕಮಾನ್ಯ ತಿಲಕರ ಬಂಧನ. ಮೂರನೆಯ ಬಾರಿ ರಾಜದ್ರೋಹದ ಆರೋಪ - ಸರಕಾರದ ವಿರುದ್ಧ ಹಿಂಸೆಯನ್ನು ಪ್ರಚೋದಿಸಿದರೆಂದು.

ತಿಲಕರು ಬಂಗಾಳ ವೊದಲಾದ ಕಡೆಗಳಲ್ಲಿ ಸರಕಾರದ ವಿರುದ್ಧ ನಡೆದ ಹಿಂಸಾಕೃತ್ಯಗಳನ್ನು ಖಂಡಿಸಿದ್ದರು. ಆದರೆ ಅವರು ಬ್ರಿಟಿಷರ ಹಿಂಬಾಲಕರಂತೆ ಅಷ್ಟರಲ್ಲೇ ಕುಳಿತುಕೊಂಡಿರಲಿಲ್ಲ. ಆ ಹಿಂಸಾಕೃತ್ಯಗಳಿಗೆ ಕಾರಣವಾದ ನೌಕರಶಾಹಿಯ ದುಷ್ಟಾಚಾರಗಳನ್ನೂ ಅಷ್ಟೇ ತೀವ್ರವಾಗಿ ಖಂಡನೆ ಮಾಡಿದ್ದರು. ಹಿಂಸೆಯಿಂದ ನಮ್ಮ ಗುರಿ ಮುಟ್ಟುವುದು ಸಾಧ್ಯವಿಲ್ಲ; ಅದೇ ರೀತಿ ಸರಕಾರ ದಬ್ಬಾಳಿಕೆಯಿಂದ ಹಿಂಸೆಯನ್ನು ತಡೆಯಲಾರದು. ಜನತೆಯ ಬೇಡಿಕೆಗಳನ್ನು ಮನ್ನಿಸುವುದರಿಂದ ಮಾತ್ರ ಈ ಪರಿಸ್ಥಿತಿಯನ್ನು ಸುಧಾರಿಸುವುದು ಸಾಧ್ಯ — ಇದು ತಿಲಕರ ಅಭಿಪ್ರಾಯ.

ತಿಲಕರು ಮತ್ತು ಮಹಾರಾಷ್ಟ್ರದ ಇಪ್ಪತ್ತನಾಲ್ಕು ಮಂದಿ ಪ್ರಮುಖ ರಾಷ್ಟ್ರೀಯವಾದಿಗಳು ಮುಜಾಫರಪುರ ಘಟನೆಯ ಅನಂತರ ಇತ್ತ ಹೇಳಿಕೆಯೊಂದರಲ್ಲಿ ಹೀಗೆಂದಿರುವರು:

"ಬಂಗಾಳದ ಕೆಲವರು ಯುವಕರು ಇತ್ತೀಚೆಗೆ ಕೈಕೊಂಡ ಹಿಂಸಾತ್ಮಕ ಕೃತ್ಯಗಳಿಂದ ಮತ್ತು ಅದರ ಪರಿಣಾಮವಾಗಿ ಸಂಭವಿಸಿದ ಸಾವು-ನೋವುಗಳಿಂದ ನಮಗೆ ಅತೀವ ವಿಷಾದವಾಗಿದೆ.

"ಈ ವಿಷಾದ ಪೂರ್ಣ ಘಟನೆಗಳಿಗೆ ಸರಕಾರದ ನಿರಂಕುಶ ಹಾಗೂ ದಬ್ಬಾಳಿಕೆಯ ಧೋರಣೆಯೇ ಕಾರಣವಾಗಿದೆಯಲ್ಲದೆ, ಕೆಲವರು ಆರೋಪಿಸುವಂತೆ ಯಾವುದೇ ಭಾಷಣಗಳು ಅಥವಾ ಬರೆಹಗಳು ಕಾರಣವಲ್ಲ ಎಂದು ನಾವು ಸ್ಪಷ್ಟವಾಗಿ ನಂಬಿದ್ದೇವೆ.

"ದಬ್ಬಾಳಿಕೆ ಮರ್ದನಗಳು ಈ ಪರಿಸ್ಥಿತಿಯನ್ನು ಸುಧಾರಿಸಲಾರವು. ಅಂತಹ ಕ್ರಮಗಳು ವಿಫಲವಾಗುವುದರಲ್ಲಿ ಸಂಶಯವಿಲ್ಲ. ದೂರದೃಷ್ಟಿಯ ರಾಜಕಾರಣ ಪಟುತ್ವ ಮತ್ತು ವಿಶಾಲ ಮನೋಭಾವದಿಂದ ಜನತೆಯ ನ್ಯಾಯವಾದ ಆಶೋತ್ತರಗಳನ್ನು ಈಡೇರಿಸುವುದರಲ್ಲಿ ಮಾತ್ರ ನಿಜವಾದ ನಿವಾರಣೆಯಿದೆ."

ಈ ಹೇಳಿಕೆ ಹೊರಡಿಸಿ ಒಂದು ತಿಂಗಳಲ್ಲಿಯೇ ತಿಲಕರ ಬಂಧನವಾಯಿತು. ಕೇಸರಿಯಲ್ಲಿ ಬರೆದ ಎರಡು ಲೇಖನಗಳು ಅವರ ಮೇಲಿನ ಆರೋಪಕ್ಕೆ ಆಧಾರ.

ಎಂಟು ದಿನಗಳ ವರೆಗೆ ಮುಂಬಯಿ ಹೈಕೋರ್ಟಿನಲ್ಲಿ ತಿಲಕರ ವಿಚಾರಣೆ ನಡೆಯಿತು. ತಿಲಕರಿಗೆ ಅವರ ಮೇಲೆ ಸರಕಾರ ಹೊರಿಸಿದ ಆರೋಪಕ್ಕೆ ಪ್ರತಿ ಹೇಳಿಕೆ ಕೊಡಲು ಇಪ್ಪತ್ತೊಂದು ತಾಸು ಹತ್ತು ನಿಮಿಷ ಹಿಡಿದುವು. ಅವರ ಭಾಷಣ ರಾಜದ್ರೋಹದ ಕಾನೂನಿನ ಮೇಲೆ ಒಂದು ಉಪನ್ಯಾಸವೇ ಆಗಿತ್ತು. ಅವರ ಭಾಷಣವನ್ನು ಕೇಳಿ ನ್ಯಾಯಾಧೀಶರು, ಜ್ಯೂರಿ, ಸರಕಾರಿ ವಕೀಲರು ಎಲ್ಲರೂ ಅಪ್ರತಿಭರಾಗಿ ಹೋಗಿದ್ದರು. ತಿಲಕರ ಪ್ರತಿಭಾಪೂರ್ಣ ವ್ಯಕ್ತಿತ್ವದ ಮುಂದೆ ಅವರೆಲ್ಲ ಯಃಕಶ್ಚಿತ ವ್ಯಕ್ತಿಗಳಾಗಿ ಕಂಡರು. ಆದರೂ ತಿಲಕರಿಗೆ ಅವರ ಕಲುಷಿತ ಮನಸ್ಸನ್ನು ತಿದ್ದುವುದಾಗಲಿಲ್ಲ, ತಮ್ಮ ನಿರಪರಾಧಿತ್ವವನ್ನು ಅವರಿಗೆ ಮನವರಿಕೆ ಮಾಡುವುದಾಗಲಿಲ್ಲ. ನ್ಯಾಯ ದೇವತೆಯ ಕಣ್ಣು ಕುರುಡಾಗಿರುವಾಗ, ಕಿವಿ ಕಿವುಡಾಗಿರುವಾಗ ಅದು ಹೇಗೆ ಸಾಧ್ಯ?

ಆದರೆ ಒಂದು ಮಾತ್ರ ಸತ್ಯ. ಪ್ರಜಾಸತ್ತಾತ್ಮಕ ಜಗತ್ತಿಗೆ ತಿಲಕರು ತಾವು ನಿರಪರಾಧಿಗಳೆಂಬುದನ್ನು ಸಿದ್ಧಮಾಡಿ ತೋರಿಸಿದ್ದರು.

ವಿಚಾರಣೆ ಮುಗಿದಿದೆ. ಜ್ಯೂರಿಯ ಅಭಿಪ್ರಾಯ ಪ್ರಕಟವಾಗು ವುದು ಉಳಿದಿದೆ. ನ್ಯಾಯಾಧೀಶರ ತೀರ್ಪನ್ನು ಇದಿರು ನೋಡುತ್ತ ನೂರಾರು ಜನ ಸದ್ದಿಲ್ಲದೆ ನಿಂತಿದ್ದಾರೆ. ಆ ಗಳಿಗೆಯಲ್ಲೂ ನಿಜವಾದ ವೀರ ನಂತೆ ತಿಲಕರು ಸ್ಥೈರ್ಯದಿಂದಲೇ ಇದ್ದರು. ಅವರ ಬಾಯಿಯಿಂದ ಭಗವಾನ್ ಶ್ರೀಕೃಷ್ಣನ "ಹತೋವಾ ಪ್ರಾಪ್ಯಸಿ ಸ್ವಗಂ ಜಿತ್ವಾವಾ ಭೋಕ್ಷ್ಯಸೆ ಮಹೀಂ" ಎಂಬ ವೀರ ವಾಕ್ಯ ಹೊರಟಿತು. "ಸತ್ತರೆ ಸ್ವರ್ಗ ವನ್ನು ಆಳುವೆ; ಗೆದ್ದರೆ ಜಗತ್ತೇ ನನ್ನ ಕಾಲಬಳಿ ಬರುವುದು." ತಿಲಕರ ಜೀವನದ ಧರ್ಮವೇ ಇದು. ಜನತೆಗಾಗಿ ಹೋರಾಡುವ ಪ್ರತಿಯೊಬ್ಬ ವ್ಯಕ್ತಿಯೂ ಅನುಸರಿಸಬೇಕಾದ ನೀತಿ ಅದು.

ಕೊನೆಗೆ ಜ್ಯೂರಿಯ ಅಭಿಪ್ರಾಯ ಬಂತು. ಒಂಭತ್ತು ಮಂದಿ ಯಲ್ಲಿ ಏಳು ಮಂದಿ ತಿಲಕರು ಅಪರಾಧಿಗಳೆಂದು ಹೇಳಿದ್ದರು.

ತೀರ್ಪು ಕೊಡುವ ಮೊದಲು ನ್ಯಾಯಾಧೀಶರು ತಿಲಕರೊಡನೆ, ಏನಾದರೂ ಹೇಳುವುದಿದೆಯೆ? ಎಂದು ಕೇಳಿದರು. ಆಗ ತಿಲಕರು ಹೇಳಿದ ಈ ಮಾತುಗಳು ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಅಚ್ಚಳಿ ಯದೆ ಉಳಿಯುವವುಗಳು!

"ಜ್ಯೂರಿಯ ಅಭಿಪ್ರಾಯ ಏನೇ ಇರಲಿ, ನಾನು ನಿರಪರಾಧಿ. ನಮ್ಮ ಆಗು ಹೋಗುಗಳನ್ನು ಆಳುವ ಉನ್ನತ ಶಕ್ತಿಗಳು ಬೇರೆಯೇ ಇವೆ. ನಾನು ಸ್ವತಂತ್ರನಾಗಿರುವುದಕ್ಕಿಂತ ಕಷ್ಟದಲ್ಲಿ ನರಳಿದರೇನೇ ನಾನು ಪ್ರತಿ ನಿಧೀಕರಿಸುವ ಧ್ಯೇಯಕ್ಕೆ ಶ್ರೇಯಸಿದೆ ಎಂಬುದು ದೈವೇಚ್ಛೆಯಾಗಿರ ಬೇಕು."

ನ್ಯಾಯಾಧೀಶರು ತೀರ್ಪು ಕೊಟ್ಟರು. ಆರು ವರ್ಷಗಳ ಗಡಿಪಾರು ಶಿಕ್ಷೆ.

ಮರುದಿನ ತಿಲಕರ ಐವತ್ತಮೂರನೆಯ ಹುಟ್ಟು ಹಬ್ಬ. ಅದಕ್ಕೆ ಉಡುಗೊರೆ ಇದು!

ಶಿಕ್ಷೆ ವಿಧಿಸಿದ ವಾರ್ತೆ ಕಿಚ್ಚಿನಂತೆ ದೇಶದಾದ್ಯಂತ ಹರಡಿತು. ವಿದ್ಯಾರ್ಥಿಗಳು ಶಾಲಾ-ಕಾಲೇಜುಗಳಿಂದ ಹೊರನಡೆದರು; ಗಿರಣಿಗಳ ಕಾರ್ಮಿಕರು ಕೆಲಸ ನಿಲ್ಲಿಸಿದರು. ಸಭೆಗಳಾದುವು; ಮೆರವಣಿಗೆಗಳಾ ದುವು; ದುಃಖ ಪ್ರದರ್ಶನದ ನಿರ್ಣಯಗಳಾದುವು. ತಮ್ಮ ಜನಪ್ರಿಯ

ನಾಯಕನಿಗೆ ಸಹಾನುಭೂತಿ ತೋರಿಸಿ ಜನಪ್ರಚಂಡ ಮತಪ್ರದರ್ಶನ ನಡೆಸಿದರು.

ತೀರ್ಪು ಓದಿ ಹೇಳಿ ನ್ಯಾಯಾಧೀಶರು ಹೊರಬಿದ್ದೊಡನೆಯೇ ಪೊಲೀಸರು ತಿಲಕರನ್ನು ವಶಕ್ಕೆ ತೆಗೆದುಕೊಂಡು ಸಬರ್ಮತಿ ಸೆರೆಮನೆಗೆ ಒಯ್ದರು. ಇದು 1908ನೇ ಜುಲಾಯಿ 22ರಂದು. ಅಲ್ಲಿಂದ ಸೆಪ್ಟಂಬರ 13ರಂದು ಮಾಂಡಲೆಗೆ.

ಮಾಂಡಲೆಯಲ್ಲಿ ಆರು ವರ್ಷಗಳ ಕಾಲ ತಿಲಕರು 20 ಅಡಿ ಉದ್ದ 12 ಅಡಿ ಅಗಲದ ಕೋಣೆಯಲ್ಲಿ ಇರಬೇಕಿತ್ತು. ಈ ಶಿಕ್ಷೆಯನ್ನನು ಭವಿಸಿ ಅವರು ಜೀವಂತ ಉಳಿಯಬಹುದೆಂದು ಅನೇಕರು ಭಾವಿಸಿರಲಿಲ್ಲ. ಆದರೆ ತಾರುಣ್ಯದಲ್ಲಿ ಅವರು ಗಳಿಸಿಕೊಂಡ ಆರೋಗ್ಯ ಮತ್ತು ಸದಾ ಕೆಲಸ ಮಾಡುತ್ತಿದ್ದ ಸುದೃಢ ಮನಸ್ಸು ಸೆರೆಮನೆಯ ಜಡ ದಿನಗಳನ್ನು ಎದುರಿಸುವ ಬಲವನ್ನು ಅವರಿಗೆ ಕೊಟ್ಟಿದ್ದುವು.

## ೧೦

# ಪುನಃ ಜನತೆಯ ಮಧ್ಯೆ

ಸಾವಿರದ ಒಂಭೈನೂರ ಹದಿನಾಲ್ಕನೆಯ ಜೂನ್ 16ರಂದು ತಿಲಕರಿಗೆ ಮಾಂಡಲೆ ಸೆರೆಮನೆಯಿಂದ ಬಿಡುಗಡೆಯಾಯಿತು. ಅಂದು ಮಧ್ಯರಾತ್ರಿ ಪೊಲೀಸರು ಗುಪ್ತವಾಗಿ ಅವರನ್ನು ಪೂನದ ಅವರ ನಿವಾಸದ ಮುಂಭಾಗದಲ್ಲಿ ತಂದು ಬಿಟ್ಟರು.

ತಿಲಕರು ಸೆರೆಮನೆಯಲ್ಲಿದ್ದ ಈ ಆರು ವರ್ಷಗಳ ಕಾಲದಲ್ಲಿ ದೇಶದ ರಾಜಕೀಯ ಸ್ಥಿತಿ ಬದಲಾಗಿತ್ತು. ಸರಕಾರದ ದಬ್ಬಾಳಿಕೆಯಿಂದಾಗಿ ಸ್ವದೇಶಿ ಚಳವಳ ಕುಂಟಿಹೋಗಿತ್ತು. ಜನಪ್ರಿಯ ಮುಖಂಡರಲ್ಲಿ ಅನೇಕರು ಸೆರೆಮನೆಯನ್ನು ಸೇರಿದ್ದರು. ಇನ್ನು ಕೆಲವರು ರಾಜಕೀಯ ಸನ್ಯಾಸ ಸ್ವೀಕರಿಸಿದ್ದರು. ಜನತೆಯ ಚಳವಳವನ್ನು ಬೆಂಬಲಿಸುವ ಪತ್ರಿಕೆಗಳು ಸರಕಾರದ ನಿರಂಕುಶ ಪತ್ರಿಕಾ ಶಾಸನಗಳಿಗೆ ಬಲಿಯಾಗಿದ್ದುವು. ತಿಲಕರು

ಕಟ್ಟಿ ಬೆಳೆಯಿಸಿದ ರಾಷ್ಟ್ರೀಯವಾದಿ ಪಕ್ಷವು ನುಚ್ಚು ನೂರಾಗಿತ್ತು. ಉದಾರವಾದಿಗಳಿಂದಲೇ ತುಂಬಿದ್ದ ಕಾಂಗ್ರೆಸಿನ ಉತ್ಸಾಹವೂ ಕುಗ್ಗಿತ್ತು. ಜನ ಸರಿಯಾದ ಮಾರ್ಗದರ್ಶನವಿಲ್ಲದೆ ಎಲ್ಲಿ? ಏನು? ಎಂದು ನೋಡುತ್ತಿದ್ದರು.

ಲೋಕಮಾನ್ಯರು ಪುನಃ ಜನತೆಯ ಮಧ್ಯೆ ಕಾಣಿಸಿಕೊಂಡಾಗ ಎಲ್ಲರ ಮನಸ್ಸುಗಳಲ್ಲಿಯೂ ಮೂಡಿದ ಪ್ರಶ್ನೆ ಒಂದೇ! ಅವರು ನೌಕರಶಾಹಿಯ ವಿರುದ್ಧ ಹೋರಾಟ ಮುಂದುವರಿಸುವರೆ? ಅಥವಾ, ಪಲಾಯನವಾದಿಯಾಗಿ ಅಧ್ಯಾತ್ಮದ ಮರೆ ಹೊಗುವರೆ?

ಅವರು ಹುಟ್ಟಿದ್ದೇ ಹೋರಾಡುವುದಕ್ಕಾಗಿ. ಜನತೆಗಾಗಿ ಹೋರಾಡುವವರಿಗೆ ಕಷ್ಟ ತಪ್ಪಿದ್ದಲ್ಲ ಎಂದು ತಿಳಿದಿದ್ದ ಅವರ ಕೈಗೆ ಪಲಾಯನ ಸೂತ್ರ ಹಿಡಿಸದು.

ಸೆರೆಮನೆಯಿಂದ ಹೊರಬಂದ ಲೋಕಮಾನ್ಯರನ್ನು ಸ್ವಾಗತಿಸುವುದಕ್ಕಾಗಿ ಪೂನದ ಜನ ದೊಡ್ಡ ಸಭೆಯೊಂದನ್ನು ಏರ್ಪಡಿಸಿದ್ದರು. ಈ ಸಭೆಯಲ್ಲಿ ಮಾತನಾಡುತ್ತ ತಿಲಕರು ಹೇಳಿದರು:

“ಆರು ವರ್ಷಗಳ ಅನಂತರ ಪುನಃ ದೇಶಕ್ಕೆ ಹಿಂದಿರುಗಿ ಜನತೆಯೊಡನೆ ಸಂಬಂಧ ಬೆಳೆಯಿಸಲು ಪ್ರಾರಂಭಿಸಿದಾಗ ತನ್ನ ಸ್ಥಿತಿ ರಿಪ್ ವಾನ್ ವಿಂಕ್ಲನಂತಾಗಿದೆ. ಜಗತ್ತು ನನ್ನನ್ನು ಮರೆಯಬೇಕು; ನಾನು ಜಗತ್ತನ್ನು ಮರೆಯಬೇಕು ಎಂಬ ದೃಷ್ಟಿಯಿಂದ ಈ ಆರು ವರ್ಷಗಳಲ್ಲಿ ಅಧಿಕಾರಿಗಳು ನನ್ನನ್ನು ಪ್ರಪಂಚದ ಸಂಬಂಧವೇ ಇಲ್ಲದಂತೆ ಕಠಿಣ ಬಂದೋಬಸ್ತಿನಲ್ಲಿ ಇಟ್ಟಿದ್ದರು. ಆದರೂ ನಾನು ಜನತೆಯನ್ನು ಮರೆತಿಲ್ಲ. ಜನ ಕೂಡ ನನ್ನನ್ನು ಮರೆತಿಲ್ಲ ಎಂಬುದನ್ನು ನೋಡಲು ನನಗೆ ಸಂತೋಷವಾಗುತ್ತದೆ. ಆರು ವರ್ಷಗಳ ಕಾಲ ಪ್ರತ್ಯೇಕವಿದ್ದ ಮಾತ್ರದಿಂದ ಜನತೆಯ ಬಗ್ಗೆ ನನಗಿರುವ ಪ್ರೇಮ ಕಡಿಮೆಯಾಗದು ಎಂದು ನಾನು ಆಶ್ವಾಸನೆ ಕೊಡಬಲ್ಲೆ. ಆರು ವರ್ಷಗಳ ಹಿಂದೆ ನಾನು ಯಾವ ರೀತಿ ಜನತೆಯ ಸೇವೆ ಮಾಡಿದೆನೋ ಅದೇ ರೀತಿ ಇನ್ನೂ ಮಾಡಲು ಸಿದ್ಧನಿದ್ದೇನೆ ಆದರೆ ನನ್ನ ದಾರಿಯನ್ನು ಮಾತ್ರ ಸ್ವಲ್ಪ ಬದಲಾಯಿಸಬೇಕಾಗಿ ಬರಬಹುದು ”

ತಿಲಕರು ಈಗ ತಮ್ಮ ಮುಂದೆ ಮೂರು ಕಾರ್ಯಕ್ರಮಗಳನ್ನು ಇಟ್ಟುಕೊಂಡರು: (i) ಕಾಂಗ್ರೆಸಿನೊಡನೆ ಸಂಧಾನ; (ii) ರಾಷ್ಟ್ರೀಯವಾದಿ ಪಕ್ಷದ ಪುನರ್ಘಟನೆ; (iii) ಹೋಮ್ ರೂಲ್ ಚಳವಳಿ.

ಆದರೆ ನೌಕರ ಶಾಹಿ ಅವರ ಬೆನ್ನ ಹಿಂದೆಯೇ ಇತ್ತು. ಪೋಲೀಸರು ಅವರ ಚಲನವಲನಗಳ ಮೇಲೆ ಸೂಕ್ಷ್ಮ ದೃಷ್ಟಿಯನ್ನಿಟ್ಟುಕೊಂಡಿದ್ದರು. ಅದಕ್ಕಾಗಿಯೇ ಅವರ ನಿವಾಸದ ಸಮೀಪ ಎರಡು ಪೋಲೀಸು ಚೌಕಿಗಳನ್ನು ತೆರೆದಿದ್ದರು. ತಿಲಕರ ಮನೆಗೆ ಹೋಗಿ ಬರುವ ಜನರು ಅಲ್ಲಿ ತಮ್ಮ ಹೆಸರು ಕೊಟ್ಟು ಹೋಗಬೇಕಿತ್ತು. ಸರಕಾರಿ ನೌಕರರು ಅಥವಾ ಸರಕಾರದೊಡನೆ ಸಂಬಂಧವಿದ್ದ ಯಾರಾದರೂ ಅಲ್ಲಿ ಹೋದರೆ ಮರು ದಿನವೇ ಅವರಿಗೆ ಎಚ್ಚರಿಕೆ ಬರುತ್ತಿತ್ತು. ಜನತೆಯ ಮಧ್ಯ ಇದ್ದರೂ ಅವರನ್ನು ಜನತೆಯಿಂದ ದೂರವಿಡಲು ಸರಕಾರ ಯತ್ನಿಸುತ್ತಿತ್ತು.

ಸೂರತ್ ಒಡಕಿನ ಅನಂತರ ತಿಲಕರು ಪ್ರಥಮ ಪ್ರಾಶಸ್ತ್ಯ ಕೊಡುತ್ತಿದ್ದ ವಿಚಾರವೆಂದರೆ ಕಾಂಗ್ರೆಸಿನೊಡನೆ ಸಂಧಾನಕ್ಕೆ ಬರುವುದು. ಕಾಂಗ್ರೆಸು ಎಲ್ಲ ದೇಶ ಪ್ರಿಯರ ಸಂಘಟನೆಯ ಕೇಂದ್ರವಾಗಬೇಕೆಂಬುದು ಅವರ ಆಶಯ. ಆದುದರಿಂದ ಉದಾರವಾದಿಗಳೊಡನೆ ಒಪ್ಪಂದಕ್ಕೆ ಬರುವ ಆಶೆಯನ್ನೆಂದೂ ಅವರು ಬಿಟ್ಟಿರಲಿಲ್ಲ. 1908ರಲ್ಲಿ ಪಾಟ್ನಾ ಎಂಬಲ್ಲಿ ಜರಗಿದ ಸಂಯುಕ್ತ ಬಂಗಾಳದ ಪ್ರಾಂತೀಯ ಪರಿಷತ್ತಿನಲ್ಲಿ ಅಂತಹ ಒಂದು ಪ್ರಯತ್ನ ನಡೆಯಿತು. ಕವಿವರ್ಯ ರವೀಂದ್ರನಾಥ ಠಾಕೂರರು ಈ ಪರಿಷತ್ತಿನ ಅಧ್ಯಕ್ಷರಾಗಿದ್ದರು. ಆದರೆ ಅದು ಪ್ರಯತ್ನವಾಗಿಯೇ ಉಳಿಯಿತೇ ವಿನಾ ಅದರಿಂದ ಮುಂದೆ ಹೋಗಲಿಲ್ಲ.

ಮಾಂಡಲೆಯಿಂದ ಹಿಂದಿರುಗಿದವರೇ ತಿಲಕರು ತಮ್ಮ ಪ್ರಯತ್ನವನ್ನು ಪುನಃ ಮುಂದುವರಿಸಿದರು. ಈಗ ಅವರಿಗೆ ಒಬ್ಬರು ಮಧ್ಯಸ್ಥರ ಸಹಾಯವೂ ಸಿಕ್ಕಿತು. ಶ್ರೀಮತಿ ಅನ್ನಿಬಿಸೆಂಟರು ಆಗಷ್ಟೇ ಭಾರತದ ರಾಜಕೀಯಕ್ಕೆ ಪ್ರವೇಶಿಸಿದ್ದರು. ಭಾರತವನ್ನೇ ತನ್ನ ಮನೆಯಾಗಿ ಮಾಡಿಕೊಂಡ ಈ ಐರಿಷ್ ಮಹಿಳೆಯ ಖ್ಯಾತಿ ಆಗಲೇ ದೇಶ ವಿದೇಶಗಳಲ್ಲಿ ಹರಡಿತ್ತು. ಎಲ್ಲ ದೇಶಗಳಲ್ಲಿಯೂ ಆಕೆಗೆ ಅನುಯಾಯಿಗಳಿದ್ದರು. ಉದಾರವಾದಿ ಅಥವಾ ರಾಷ್ಟ್ರೀಯವಾದಿ ಗುಂಪುಗಳೆರಡಕ್ಕೂ ಸೇರದ ಇವರು ಮಧ್ಯಸ್ಥಿತಿಗೆ ಹೇಳಿದ ಜನವಾಗಿದ್ದರು. ಆದರೆ ಉದಾರವಾದಿಗಳ ಮೊಂಡುತನದ ಮುಂದೆ ಇಂತಹ ಪ್ರತಿಭಾ ಶಾಲಿ ವ್ಯಕ್ತಿಯ ಪ್ರಯತ್ನವೂ ಸೋಲನ್ನು ಕಾಣಬೇಕಾಯಿತು. ಫಿರೋಜ ಷಾ ಮೆಹತಾ ಮತ್ತು ಗೋಖಲೆಯವರಿಗೆ ತಿಲಕರ ಮೇಲಿನ ಭಯ ಇನ್ನೂ ಹೋಗಿರಲಿಲ್ಲ. ಅವರನ್ನು ಕಾಂಗ್ರೆ

ಸಿನ ಒಳಬರಲು ಬಿಟ್ಟರೆ ಸಂಸ್ಥೆಯಲ್ಲಿ ಅವರ ವಶವಾಗುವುದೇ ಎಂಬ ಸಂಶಯ ಇವರಿಗೆ! ಡಾ। ಪಟ್ಟಾಭಿ ಸೀತಾರಾಮಯ್ಯನವರು ತಮ್ಮ ಕಾಂಗ್ರೆಸಿನ ಇತಿಹಾಸದಲ್ಲಿ ಇವರ ಬಗ್ಗೆ ಬರೆಯುತ್ತ, "ಕೆಲವೊಂದು ಶಕ್ತಿಗಳು ಸುದೈವದಿಂದ ಒಂದಾಗದಿರುತ್ತಿದ್ದರೆ 1915ರಲ್ಲಿ ಲೋಕಮಾನ್ಯ ತಿಲಕರು ಮಹಾರಾಷ್ಟ್ರದ ಮಾತ್ರವಲ್ಲ ಸಮಗ್ರ ಭಾರತದ ಅನಭಿಷಿಕ್ತ ದೊರೆಯಾಗಬೇಕಿತ್ತು" ಎಂದಿರುವರು.

ಸಾವಿರದ ಒಂಭೈನೂರ ಹದಿನೈದು–ಹದಿನಾರರಲ್ಲಿ ತಿಲಕರು ತಮ್ಮ ರಾಷ್ಟ್ರೀಯವಾದಿ ಪಕ್ಷದ ಪುನರ್ಘಟನೆಯಲ್ಲಿ ಮಗ್ನರಾಗಿದ್ದರು. ಮಹಾರಾಷ್ಟ್ರದಲ್ಲಿ ರಾಷ್ಟ್ರೀಯವಾದಿ ಪಕ್ಷ ಇನ್ನೂ ಪ್ರಬಲವಾಗಿತ್ತು. ಇದಕ್ಕೆ ಸಾಕ್ಷಿಯೆಂಬಂತೆ ತಿಲಕರು ಪೂನದಲ್ಲಿ ಕರೆದ ಪ್ರಾಂತೀಯ ಪರಿಷತ್ತಿಗೆ ಒಂದು ಸಾವಿರಕ್ಕಿಂತಲೂ ಹೆಚ್ಚು ಪ್ರತಿನಿಧಿಗಳು ಬಂದಿದ್ದರು. ಪ್ರತಿನಿಧಿಗಳಲ್ಲಿ ಕಂಡು ಬರುತ್ತಿದ್ದ ಉತ್ಸಾಹ-ಆಶಾಭಾವಗಳು ರಾಷ್ಟ್ರೀಯವಾದಿ ಪಕ್ಷಕ್ಕೆ ಉಜ್ವಲ ಭವಿಷ್ಯವಿದೆ ಎಂಬುದನ್ನು ಸಾರುತ್ತಿದ್ದುವು. ಇದಕ್ಕೆ ಪ್ರತಿಯಾಗಿ, ಕೆಲವೇ ತಿಂಗಳುಗಳ ಅನಂತರ ಉದಾರವಾದಿಗಳು ಕರೆದ ಪರಿಷತ್ತಿಗೆ ಬಂದ ಪ್ರತಿನಿಧಿಗಳ ಸಂಖ್ಯೆಯನ್ನು ಮತ್ತು ಅವರಲ್ಲಿ ಕಂಡು ಬರುತ್ತಿದ್ದ ನಿರಾಶೆ–ನಿರುತ್ಸಾಹಗಳನ್ನು ನೋಡಿದರೆ ಉದಾರವಾದಿಗಳ ಕಾಲ ಮುಗಿಯುತ್ತ ಬಂದುದು ಸ್ಪಷ್ಟವಾಗುತ್ತಿತ್ತು. ಆದರೆ ಅವರಿಗೆ ಅವರ ಪರಿಷತ್ತಿನಲ್ಲಿ ಲಾರ್ಡ್ ವಿಲ್ಲಿಂಗ್ಡನ್ನರಂತಹ ಉನ್ನತ ಸರಕಾರಿ ಅಧಿಕಾರಿಗಳು ಉಪಸ್ಥಿತರಿದ್ದ ಸಮಾಧಾನವಿತ್ತು ಎನ್ನೋಣ!

ಪೂನಾ ಪರಿಷತ್ತು ಮತ್ತೊಂದು ವಿಧದಿಂದಲೂ ಮಹತ್ವದ್ದಾಗಿದೆ. ಹೋಮ್‌ರೂಲ್‌ನ ಪ್ರಥಮ ಕರೆಯನ್ನು ಕೊಟ್ಟುದೂ ಇದೇ ಪರಿಷತ್ತು.

ಮಾಂಡಲೆಯಿಂದ ಹಿಂದಿರುಗಿದ ತಿಲಕರು ದೇಶದಾದ್ಯಂತ ಪ್ರಬಲವಾದ ಹೋಮ್‌ರೂಲ್ ಚಳವಳವನ್ನು ಪ್ರಾರಂಭಿಸಬೇಕೆಂಬ ಉದ್ದೇಶವನ್ನಿಟ್ಟುಕೊಂಡಿದ್ದರು. ಹೋಮ್‌ರೂಲ್ ಎಂದರೆ ಸ್ವರಾಜ್ಯ. ಆದರೆ ಆಗಿನ ಅರ್ಥದಲ್ಲಿ ಸ್ವರಾಜ್ಯವೆಂದರೆ ಬ್ರಿಟಿಷರನ್ನು ಪೂರ್ತಿಯಾಗಿ ಓಡಿಸುವುದಾಗಿರಲಿಲ್ಲ. ಬ್ರಿಟಿಷ್ ಪ್ರಭುತ್ವದಡಿಯಲ್ಲಿಯೇ ಆಂತರಿಕ ಆಡಳಿತೆಯ ಕೆಲವೊಂದು ಅಧಿಕಾರಗಳನ್ನು ಪಡೆಯುವುದಷ್ಟೇ ಹೋಮ್‌ರೂಲ್ ಅಥವಾ ಸ್ವರಾಜ್ಯ ಶಬ್ದದ ಅರ್ಥದ ವ್ಯಾಪಕವಾಗಿತ್ತು. 1906ರಲ್ಲಿ

ಕಲ್ಕತ್ತದಲ್ಲಿ ಜರಗಿದ ಅಧಿವೇಶನದಲ್ಲಿ ಸ್ವರಾಜ್ಯ ಗೊತ್ತುವಳಿ ಸ್ವೀಕೃತ ವಾದುದೂ ಇದೇ ಅರ್ಥದಲ್ಲಿ.

ಹೋಮ್‌ರೂಲ್ ಚಳವಳ ಕಾಂಗ್ರೆಸ್ ಸಂಸ್ಥೆಯ ಆಶ್ರಯದಲ್ಲಿಯೇ ನಡೆಯಬೇಕೆಂಬುದು ತಿಲಕರ ಆಶಯವಾಗಿತ್ತು. ಆದರೆ ಕಾಂಗ್ರೆಸ್ ಆಗ ಉದಾರವಾದಿಗಳಿಂದಲೇ ತುಂಬಿತ್ತು. ತಿಲಕರ ಪಕ್ಷದವರಿಗೆ ಅದರಲ್ಲಿನ್ನೂ ಪ್ರವೇಶವಿರಲಿಲ್ಲ. ಸಂಧಾನವಾಗಿ ಪ್ರವೇಶ ದೊರಕುವಂತಾದರೂ ಉದಾರ ವಾದಿಗಳು ಪ್ರಬಲರಾಗಿರುವ ವರೆಗೆ ಕಾಂಗ್ರೆಸ್ ಈ ರೀತಿಯ ಚಳವಳದ ನಾಯಕತ್ವ ಸ್ವೀಕರಿಸಬಹುದೆಂಬುದು ಬರೇ ಕನಸು. ಆದುದರಿಂದ ತಿಲಕರ ಚಳವಳವನ್ನು ನಡೆಸಿಕೊಂಡು ಹೋಗುವ ಬಗ್ಗೆ 1916ನೇ ಎಪ್ರಿಲ್ 23ರಂದು 'ಇಂಡಿಯನ್ ಹೋಮ್‌ರೂಲ್ ಲೀಗ್' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಶ್ರೀಮತಿ ಬಿಸೆಂಟರು ತಮ್ಮ 'ಅಖಿಲ ಭಾರತ ಹೋಮ್ ರೂಲ್ ಲೀಗ್'ನ್ನು ಪ್ರಾರಂಭಿಸಿದುದು ಇದಾದ ಆರು ತಿಂಗಳುಗಳ ಅನಂತರ. ತಿಲಕರು ಸ್ಥಾಪಿಸಿದ ಸಂಸ್ಥೆಯ ಕೇಂದ್ರವು ಪೂನದಲ್ಲಿಯೂ, ಬಿಸೆಂಟರ ಲೀಗಿನ ಕೇಂದ್ರ ಮದ್ರಾಸಿನಲ್ಲಿಯೂ ಇತ್ತು. ಈ ಎರಡು ಸಂಸ್ಥೆ ಗಳು ಪ್ರತ್ಯೇಕವಾಗಿದ್ದರೂ ಮುಂದೆ ಇಬ್ಬರು ಮುಖಂಡರೂ ಒಟ್ಟಾಗಿಯೇ ಹೋಮ್‌ರೂಲ್ ಚಳವಳವನ್ನು ಮುಂದುವರಿಸಿಕೊಂಡು ಹೋದರು.

ಅದು ಮೊದಲನೆಯ ಮಹಾಯುದ್ಧದ ಕಾಲ. ತಿಲಕರು ಹೋಮ್ ರೂಲ್ ಚಳವಳ ನಡೆಸುತ್ತಿದ್ದರೂ ಯುದ್ಧದ ವಿಷಯದಲ್ಲಿ ಸರಕಾರಕ್ಕೆ ಬೆಂಬಲ ಕೊಟ್ಟರು. ಸೈನ್ಯಕ್ಕೆ ಜನರನ್ನು ಸೇರಿಸುವುದರಲ್ಲಿ ನೆರವಾಗು ವುದಾಗಿ ಹೇಳಿದರು. ಆದರೆ ಸೈನ್ಯದಲ್ಲಿ ಉನ್ನತ ಅಧಿಕಾರ ಸ್ಥಾನಗಳನ್ನು ಜಾತಿ ಮತಭೇದವಿಲ್ಲದೆ ಎಲ್ಲ ಭಾರತೀಯರಿಗೂ ತೆರೆದಿಡಬೇಕೆಂದು ಅವರ ಕೇಳಿಕೆಯಿತ್ತು. ಅಂತಹ ಆಶ್ವಾಸನೆ ಕೊಡಬೇಕೆಂದು ಅವರು ಸರಕಾರ ವನ್ನು ಕೇಳಿಕೊಂಡರು. ಸರಕಾರ ಆಶ್ವಾಸನೆಯನ್ನು ಕೊಡಲೂ ಇಲ್ಲ; ತಿಲಕರ ಸಹಕಾರ ಹಸ್ತವನ್ನು ಸ್ವೀಕರಿಸಲೂ ಇಲ್ಲ. ನೌಕರ ಶಾಹಿ ಇನ್ನೂ ಅವರನ್ನು ಸಂಶಯ ದೃಷ್ಟಿಯಿಂದಲೊ ನೋಡುತ್ತಿತ್ತು. ಅವರ ಸ್ನೇಹ ಹಸ್ತವನ್ನು ಸ್ವೀಕರಿಸುವುದರ ಬದಲು ಅವರ ಮೇಲೆ, ಅವರ ಭಾಷಣಗಳ ಮೇಲೆ, ಅವರ ಚಲನವಲನಗಳ ಮೇಲೆ, ಅನೇಕ ನಿರ್ಬಂಧ ಗಳನ್ನು ಹಾಕಿತು.

ತಿಲಕರು ಅಲ್ಲಲ್ಲಿ ಸಭೆಗಳನ್ನೇರ್ಪಡಿಸಿ, ಭಾಷಣ ಮಾಡಿ ಹೋಮ್ ರೂಲ್ ಪ್ರಚಾರ ಮಾಡುತ್ತಿದ್ದರು. ಸರಕಾರ ಈಗ ಅವರ ಬಾಯಿ ಮುಚ್ಚಿಸಬೇಕೆಂದು ನಿರ್ಧರಿಸಿತು. ಅವರು ಬೆಳಗಾಂವಿಯಲ್ಲಿ ಹಾಗೂ ಅಹಮ್ಮದನಗರದಲ್ಲಿ ಮಾಡಿದ ಮೂರು ಹೋಮ್‌ರೂಲ್ ಭಾಷಣ ಗಳನ್ನೆತ್ತಿಕೊಂಡು, ಈ ಭಾಷಣಗಳು ಸರಕಾರ ವಿರುದ್ಧ ಜನತೆಯಲ್ಲಿ ಅಸಂತೋಷ- ಅತೃಪ್ತಿಗಳನ್ನು ಹುಟ್ಟಿಸುತ್ತವೆ ಎಂದು ಆರೋಪಿಸಿ, ಅವರನ್ನು ಪೂನದ ಸಿಟಿ ಮ್ಯಾಜಿಸ್ಟ್ರೇಟರ ಮುಂದೆ ವಿಚಾರಣೆಗೆ ಗುರಿ ಪಡಿಸಿತು. ತಿಲಕರು ಸರಕಾರದ ವಿರುದ್ಧ ಅಸಂತೋಷ ಹಬ್ಬಿಸುವ ಮಾತು ಹಾಗಿರಲಿ, ಪ್ರತಿಯೊಂದು ಭಾಷಣದಲ್ಲಿಯೂ ಅವರು ಪ್ರಭುತ್ವಕ್ಕೆ ತಮ್ಮ ವಿಧೇಯತೆಯನ್ನು ವ್ಯಕ್ತಪಡಿಸುತ್ತಿದ್ದರು. ಆದರೆ ಸರಕಾರಿ ವಕೀಲರು ಆ ಭಾಗಗಳನ್ನು ಬಿಟ್ಟು, ಸರಕಾರದ ವಿರುದ್ಧವಿದ್ದ ಭಾಗ ಗಳನ್ನಷ್ಟೇ ಎತ್ತಿಕೊಂಡು ತಮ್ಮ ವಾದವನ್ನು ಮುಂದೊಡ್ಡಿದರು ತಿಲಕರ ವಿಧೇಯತೆಯಲ್ಲಿ ಕಾನೂನಿನ ಹಿಡಿತದಿಂದ ತಪ್ಪಿಸಿಕೊಳ್ಳಲು ಒಂದು ತಂತ್ರ ವೆಂದು ಹೇಳಲೂ ಅವರು ಹಿಂಜರಿಯಲಿಲ್ಲ. ಮ್ಯಾಜಿಸ್ಟ್ರೇಟರು ಈ ವಾದ ವನ್ನು ಒಪ್ಪಿಕೊಂಡು, ಒಂದು ವರ್ಷದ ಒಳ್ಳೆಯ ನಡತೆಯ ಬಗ್ಗೆ ತಿಲಕರು ಸರಕಾರಕ್ಕೆ ರೂ. 20,000ದ ಮುಚ್ಚಳಿಕೆಯನ್ನೂ ರೂ. 10,000ದ ಎರಡು ಜಾಮೀನುಗಳನ್ನೂ ಕೊಡಬೇಕೆಂದು ವಿಧಿಸಿದರು. ಆದರೆ ತಿಲಕರು ಹೈಕೋರ್ಟಿಗೆ ಅಪೀಲು ಮಾಡಿಕೊಂಡಾಗ ಕೆಳಗಿನ ಕೋರ್ಟಿನ ಈ ನಿರ್ಣಯ ತಿರಸ್ಕರಿಸಲ್ಪಟ್ಟಿತು. ಈ ಖಟ್ಲೆಯಲ್ಲಿ ಮುಹಮ್ಮದಾಲಿ ಜಿನ್ನಾ ತಿಲಕರ ಪರವಾಗಿ ವಾದಿಸಿದ್ದರು. ಜಿನ್ನಾ ಸಾಹೇಬರು ಆಗಿನ್ನೂ ಪಾಕಿ ಸ್ತಾನವಾದಿಗಳಾಗಿರಲಿಲ್ಲ. ಅವರು ಹೋಮ್‌ರೂಲ್ ಚಳವಳದ ಬೆಂಬ ಲಿಗರಾಗಿದ್ದರು.

ಕಾಂಗ್ರೆಸಿನೊಡನೆ ಸಂಧಾನಕ್ಕೆ ಬರುವ ಪ್ರಯತ್ನವನ್ನು ತಿಲಕರು ಇನ್ನೂ ಬಿಟ್ಟಿರಲಿಲ್ಲ. 1915ರಲ್ಲಿ ಮುಂಬಯಿಯಲ್ಲಿ ಜರಗಿದ ಕಾಂಗ್ರೆಸ್ ಅಧಿವೇಶನದಲ್ಲಿ ಅವರ ಪ್ರಯತ್ನ ಫಲಕೊಡುವ ಚಿಹ್ನೆಗಳು ಕಂಡು ಬಂದುವು. ರಾಷ್ಟ್ರೀಯವಾದಿಗಳ ಪ್ರಬಲ ವಿರೋಧಿಗಳಾದ ಗೋಖಲೆ ಮತ್ತು ಮೆಹತಾ ಅಷ್ಟರಲ್ಲೇ ತೀರಿಕೊಂಡಿದ್ದುದರಿಂದ ತಿಲಕರಿಗೆ ಮತ್ತು ಅವರ ಅನುಯಾಯಿಗಳಿಗೆ ಕಾಂಗ್ರೆಸಿನಲ್ಲಿ ಪ್ರವೇಶ ಕೊಡುವುದಕ್ಕಿದ್ದ

ವಿರೋಧ ಕಡಿಮೆಯಾಗಿತ್ತು. 1907ರಲ್ಲಿ ಸೂರತ್‌ನಲ್ಲಿ ಉದಾರವಾದಿಗಳು ಸ್ವೀಕರಿಸಿದ ಹೊಸ ಘಟನೆಯಂತೆ ರಾಷ್ಟ್ರೀಯವಾದಿಗಳಿಗೆ ಕಾಂಗ್ರೆಸಿನಲ್ಲಿ ಪ್ರವೇಶಿಸುವುದು ಸಾಧ್ಯವಿರಲಿಲ್ಲ ಎಂದು ಹಿಂದೆ ಹೇಳಿದೆ. ಮುಂಬಯಿ ಅಧಿವೇಶನದಲ್ಲಿ ಈ ನಿರ್ಬಂಧವನ್ನು ಸಡಿಲಿಸುವ ಬದಲಾವಣೆಗಳಾದುವು. ಕಾಂಗ್ರೆಸ್ ಅಧಿವೇಶನಕ್ಕೆ ರಾಷ್ಟ್ರೀಯವಾದಿಗಳೂ ಪ್ರತಿನಿಧಿಗಳಾಗಿ ಆರಿಸಿ ಬರಲು ಸಾಧ್ಯವಾಗುವಂತೆ ಘಟನೆಯನ್ನು ತಿದ್ದಲಾಯಿತು.

ತಿಲಕರು 1916ನೇ ಜನವರಿಯಲ್ಲಿ ಕಾಂಗ್ರೆಸ್ ಸೇರುವ ತಮ್ಮ ನಿರ್ಧಾರವನ್ನು ಬಹಿರಂಗವಾಗಿ ಸಾರಿದರು.

ಆದರೆ ಅದಕ್ಕಾಗಿ ಅವರು ಇನ್ನೂ ಒಂದು ವರ್ಷ ಕಾದಿರಬೇಕು— ಮುಂದಿನ ವರ್ಷಕ್ಕೆ ಪ್ರತಿನಿಧಿಗಳ ಆಯ್ಕೆಯಾಗುವ ವರೆಗೆ.

ತಿಲಕರಿಗೆ ಈಗ ಅರುವತ್ತು ತುಂಬಿತು. ಮನುಷ್ಯ ಜೀವನದಲ್ಲಿ ಅರುವತ್ತು ವರ್ಷಗಳೆಂದರೆ ಕಡಿಮೆಯೇನಲ್ಲ. ತಿಲಕರ ಜೀವನದಲ್ಲಂತೂ ಅರುವತ್ತು ವರ್ಷಗಳು ಆರು ಶತಮಾನಗಳಿಗೆ ಸರಿ! ಈ ಅರುವತ್ತು ವರ್ಷಗಳಲ್ಲಿ ಅವರು ಎಷ್ಟೊಂದು ಕಷ್ಟ ನಷ್ಟಗಳನ್ನು ಅನುಭವಿಸಲಿಲ್ಲ! ಎಷ್ಟೊಂದು ತ್ಯಾಗ ಮಾಡಲಿಲ್ಲ! ಎಷ್ಟೊಂದು ಹೋರಾಟಗಳನ್ನು ಹೂಡಲಿಲ್ಲ! ಎಷ್ಟೊಂದು ಬಾರಿ ಸರಕಾರದ ಮರ್ದನ-ದಬ್ಬಾಳಿಕೆಗಳನ್ನೆದುರಿಸಲಿಲ್ಲ!

ಇವನ್ನೆಲ್ಲ ಎದುರಿಸಿಯೂ ತಿಲಕರು ತಿಲಕರಾಗಿಯೇ ಉಳಿದಿದ್ದಾರೆ ದೇಶಕ್ಕಾಗಿ ಹೋರಾಡುವ ಅವರ ಸದಿಚ್ಛೆ-ನಿರ್ಧಾರ ಎಂದಿಗಿಂತ ಇಂದು ಬಲವಾಗಿದೆ.

ಮಹಾರಾಷ್ಟ್ರ ತಮ್ಮ ಪ್ರೀತಿಯ ಮುಂದಾಳಿನ ಷಷ್ಟ್ಯಬ್ಧಿ ಪೂರ್ತಿ ಸಮಾರಂಭವನ್ನು ವಿಜೃಂಭಣೆಯಿಂದ ಆಚರಿಸಿತು. ಪೂನದಲ್ಲಿ ಪ್ರಚಂಡ ಸಭೆ ಜರಗಿಸಿ ಜನ ತಿಲಕರನ್ನು ಗೌರವಿಸಿದರು. ದೇಶಕ್ಕೆ ಅವರು ಸಲ್ಲಿಸಿದ ಸೇವೆಯ ಜ್ಞಾಪಕಾರ್ಥವಾಗಿ ಅವರಿಗೆ ಒಂದು ಲಕ್ಷ ರೂಪಾಯಿಗಳ ಹಮ್ಮಿಣಿಯನ್ನು ಅರ್ಪಿಸಿದರು.

ಈ ಎಲ್ಲ ಗೌರವ-ಅಭಿನಂದನೆಗಳಿಗೆ ತಿಲಕರು ಕೊಟ್ಟ ಉತ್ತರವೆಂದರೆ ಜನ ಸೇವೆ ಮಾಡುವ ಶಕ್ತಿ ತಮಗೆ ಇನ್ನೂ ಬರಲಿ, ಎಂದು.

—o⊂⊃oo⊂⊃o—

## ೧೧

# ಲಕ್ನೋ ಕಾಂಗ್ರೆಸ್ ಮತ್ತು ಅನಂತರ

ಕಾಂಗ್ರೆಸಿನ ಇತಿಹಾಸದಲ್ಲಿ 1907ರ ಸೂರತ್ ಅಧಿವೇಶನ ಹೇಗೆ ಮುಖ್ಯ ಘಟನೆಯಾಗಿದೆಯೋ ಹಾಗೆಯೇ 1916ರ ಲಕ್ನೋ ಅಧಿವೇಶನ ಮರೆಯಲಾರದ ಒಂದು ಘಟ್ಟವಾಗಿದೆ. ಸೂರತ್‌ನಲ್ಲಿ ಕಾಂಗ್ರೆಸ್ ಒಡೆದು ಇಬ್ಭಣವಾದರೆ, ಲಕ್ನೋದಲ್ಲಿ ಒಡೆದು ಹೋದ ಎರಡು ಬಣಗಳು ಒಂದುಗೂಡಿ ಸಂಸ್ಥೆಯಲ್ಲಿ ಪುನಃ ಐಕ್ಯವುಂಟಾಯಿತು. ಕಲ್ಕತ್ತೆದ ಸ್ವರಾಜ್ಯ ಗೊತ್ತುವಳಿ ಸೂರತ್‌ನಲ್ಲಿ ಮೂಲೆಗೆ ತಳ್ಳಲ್ಪಟ್ಟರೆ ಲಕ್ನೋದಲ್ಲಿ ಸ್ವಾಯತ್ತ ಸರಕಾರದ ಅಥವಾ ಜವಾಬ್ದಾರಿ ಸರಕಾರದ ನಿರ್ಣಯ ಪುನಃ ಸ್ಪಷ್ಟವಾದ ಮಾತುಗಳಲ್ಲಿ ಸಾರಲ್ಪಟ್ಟಿತು. ಲಕ್ನೋ ಅಧಿವೇಶನ ತಿಲಕರ ಧೋರಣೆಯ ಹೆಗ್ಗುರುತು.

ಮೊದಲೇ ಘೋಷಿಸಿದ್ದಂತೆ ತಿಲಕರು ಲಕ್ನೋ ಅಧಿವೇಶನದಲ್ಲಿ ತಮ್ಮ ಅನುಯಾಯಿಗಳೊಡನೆ ಕಾಂಗ್ರೆಸ್ ಸೇರಿದರು. ಮುಂಬಯಿ ಪ್ರಾಂತ್ಯದಿಂದ ರಾಷ್ಟ್ರೀಯವಾದಿಗಳೇ ಬಹುಸಂಖ್ಯೆಯಲ್ಲಿ ಅಧಿವೇಶನಕ್ಕೆ ಪ್ರತಿನಿಧಿಗಳಾಗಿ ಆರಿಸಿಬಂದಿದ್ದರು. ಸ್ವಾಯತ್ತ ಸರಕಾರದ ಗೊತ್ತುವಳಿಯನ್ನು ಅನುಮೋದಿಸಲು ಲೋಕಮಾನ್ಯರು ಎದ್ದು ನಿಂತಾಗ ನೆರೆದ ಜನಸಮೂಹ ಪ್ರಚಂಡ ಘೋಷಣೆಗಳೊಡನೆ ಅವರಿಗೆ ಸ್ವಾಗತವಿತ್ತಿತು. ಆಗ ತಿಲಕರು ಆಡಿದ ಮಾತುಗಳಿವು:

"ಇದು ವೈಯಕ್ತಿಕವಾಗಿ ನನಗಿತ್ತ ಸ್ವಾಗತವಲ್ಲ ಎಂದು ತಿಳಿಯುದಷ್ಟು ಹುಂಬ ನಾನಲ್ಲ. ನಾನು ಈ ವರೆಗೆ ಹೋರಾಡುತ್ತ ಬಂದ ತತ್ವಗಳಿಗಾಗಿ, ಯಾವ ತತ್ವಗಳು ನಾನೀಗ ಅನುಮೋದಿಸುವ ಗೊತ್ತುವಳಿಯಲ್ಲಿ ಅಡಕವಾಗಿದೆಯೋ ಅವುಗಳಿಗಾಗಿ ಈ ಸ್ವಾಗತ ಎಂದು ನಾನು ತಿಳಿಯುತ್ತೇನೆ. ಸ್ವಾಯತ್ತ ಸರಕಾರದ ಈ ಯೋಜನೆಯನ್ನು ನಾವೆಲ್ಲ ಒಂದಾಗಿ ಮುಂದಿಡುವುದನ್ನು ಕಾಣುವುದಕ್ಕಾಗಿಯೇ ನಾನು ಈ ಹತ್ತು ವರ್ಷ ಬದುಕಿದ್ದೇನೆ."

ಸ್ವರಾಜ್ಯ, ಸ್ವಾಯತ್ತ ಸರಕಾರ, ಹೋಮ್‌ರೂಲ್ ಇವೆಲ್ಲವುಗಳ ಅರ್ಥವೂ ಒಂದೆ. ತಿಲಕರು ಅದನ್ನು ಹೀಗೆ ವಿವೇಚಿಸಿದ್ದಾರೆ:

"ಸ್ವಾಯತ್ತ ಸರಕಾರವೆಂದರೆ ಪ್ರಾತಿನಿಧಿಕ ಸರಕಾರ; ಕೆಲವೇ ಮಂದಿ ಸರಕಾರಿ ನೌಕರರ ಹಿತಕ್ಕಾಗಿ ಜನತೆಯ ಇಚ್ಛೆಗಳನ್ನು ತಿರಸ್ಕರಿಸದೆ, ಮನ್ನಿಸುವ ಸರಕಾರ. ಈಗಿನಂತೆ ವೈಸರಾಯ್ ಇರಲಿ; ನೀವು ಒಪ್ಪಿದರೆ ಅವನು ಆಂಗ್ಲನಾದರೂ ಆಗಲಿ. ಆದರೆ ಆತ ಜನತೆಯ ಪ್ರತಿನಿಧಿಗಳ ಸಲಹೆಯಂತೆ ವರ್ತಿಸಲಿ. ನಮ್ಮ ಹಣ ನಮ್ಮ ಒಪ್ಪಿಗೆಯಂತೆ ನಮಗಾಗಿಯೇ ಉಪಯೋಗವಾಗಲಿ. ಸರಕಾರಿ ನೌಕರರು ಈಗಿನಂತೆ ಜನತೆಯ ಒಡೆಯರಾಗದೆ ಸೇವಕರಾಗಲಿ. ಕೌನ್ಸಿಲಿನಲ್ಲಿ ಎಷ್ಟು ಮಂದಿ ಸದಸ್ಯರಿರುವರು ಎಂಬುದು ಪ್ರಶ್ನೆಯಲ್ಲ. ಈ ಸದಸ್ಯರಲ್ಲಿ ಬಹುಸಂಖ್ಯಾಕರು ಭಾರತದ ಜನತೆಯನ್ನು ಪ್ರತಿನಿಧೀಕರಿಸುವರೋ, ಅವರು ಸರಕಾರದ ಧೋರಣೆಯನ್ನು ನಿರೂಪಿಸುವರೋ ಎಂಬುದು ಮುಖ್ಯವಾಗಿದೆ. 'ಹೋಮ್ ರೂಲ್'ನ ಅರ್ಥ ಇಷ್ಟೆ."

ಲಕ್ನೋ ಅಧಿವೇಶನದಲ್ಲಿ ರಾಷ್ಟ್ರೀಯವಾದಿಗಳು ಮತ್ತು ಉದಾರವಾದಿಗಳಷ್ಟೇ ಒಂದಾದುದಲ್ಲ; ಭಾರತದ ಎರಡು ಪ್ರಮುಖ ಧರ್ಮೀಯರಾದ ಹಿಂದುಗಳು ಮತ್ತು ಮುಸ್ಲಿಮರೂ ಒಂದಾದರು. ಎಲ್ಲಿ ಹೋದರೂ ಒಡೆದು ಆಳುವ ನೀತಿಯನ್ನನುಸರಿಸುವ ಬ್ರಿಟಿಷರು ಭಾರತದಲ್ಲಿಯೂ ಹಿಂದುಗಳನ್ನು ಮತ್ತು ಮುಸಲ್ಮಾನರನ್ನು ಪರಸ್ಪರ ವಿರುದ್ಧ ಎತ್ತಿಕಟ್ಟಿ ತಮ್ಮ ಸಾಮ್ರಾಜ್ಯಶಾಹಿ ಹಿಡಿತವನ್ನು ಬಲಪಡಿಸಲು ಯತ್ನಿಸುತ್ತಿದ್ದರು. ಆದರೆ ಈಗ ಹಿಂದುಗಳು ಮತ್ತು ಮುಸಲ್ಮಾನರು ಒಂದಾಗಿಯೇ ಸ್ವಾಯತ್ತ ಸರಕಾರದ ಯೋಜನೆಯನ್ನು ಆಳರಸರ ಮುಂದಿಟ್ಟಾಗ ಅವರಿಗೆ ಅಚ್ಚರಿಯಾದುದು ಅಸಹಜವೇನಲ್ಲ. ಕಾಂಗ್ರೆಸಿನ ಲಕ್ನೋ ಅಧಿವೇಶನದಲ್ಲಿ ಸ್ವೀಕಾರವಾದ ಯೋಜನೆಯನ್ನು ಮುಸ್ಲಿಂ ಲೀಗ್ ಮತ್ತು ಕಾಂಗ್ರೆಸ್ ಎರಡೂ ಪಕ್ಷಗಳಿಗೆ ಸೇರಿದ ಮುಖಂಡರೂ ಸೇರಿ ತಯಾರಿಸಿದ್ದರು. ಅದೇ ಯೋಜನೆ ಲಕ್ನೋವಿನಲ್ಲಿಯೇ ಸೇರಿದ ಮುಸ್ಲಿಂ ಲೀಗಿನ ಅಧಿವೇಶನದಲ್ಲಿಯೂ ಮಾನ್ಯವಾಯಿತು.

ಹಿಂದುಗಳನ್ನು ಮತ್ತು ಮುಸ್ಲಿಮರನ್ನು ಒಟ್ಟಿಗೆ ತರುವುದರಲ್ಲಿ ತಿಲಕರ ಪಾತ್ರ ಕಡಿಮೆಯೇನಲ್ಲ. ಲಕ್ನೋದಲ್ಲಿ ಸ್ವೀಕಾರವಾದ ಸ್ವಾಯತ್ತ

ಸರಕಾರದ ಯೋಜನೆಯ ಹಿಂದೆ ಅಡಗಿದ್ದ ಪ್ರಬಲ ಕೈಯೇ ಅವರದು. ಈ ಯೋಜನೆಯಲ್ಲಿ ಮುಂದಿನ ಸರಕಾರದ ರೂಪರೇಖೆಗಳನ್ನು ಕೊಡಲಾಗಿತ್ತಲ್ಲದೆ, ಪ್ರಾಂತಿಕ ಮತ್ತು ಕೇಂದ್ರ ಶಾಸನ ಸಭೆಗಳಲ್ಲಿ ಹಿಂದುಗಳಿಗೆ ಮತ್ತು ಮುಸ್ಲಿಮರಿಗೆ ಯಾವ ಪ್ರಮಾಣದಲ್ಲಿ ಪ್ರಾತಿನಿಧ್ಯವಿರಬೇಕೆಂಬುದನ್ನು ನಮೂದಿಸಲಾಗಿತ್ತು.

ಮುಸ್ಲಿಮರು ಪರಧರ್ಮಿಯರಾದುದರಿಂದ ಅವರು ಪರಕೀಯರು ಎಂದು ತಿಲಕರು ತಿಳಿದಿರಲಿಲ್ಲ. ಹಿಂದುಗಳಂತೆಯೇ ಅವರೂ ಭಾರತೀಯರು ಎಂಬುದು ಅವರ ಸ್ಪಷ್ಟ ಅಭಿಪ್ರಾಯವಾಗಿತ್ತು. ರಾಜಕೀಯದೊಡನೆ ಜಾತಿ-ಮತಗಳನ್ನು ಬೆರೆಯಬಾರದು. ರಾಷ್ಟ್ರವನ್ನು ಕಟ್ಟುವುದರಲ್ಲಿ ಹಿಂದು, ಮುಸ್ಲಿಂ ಮೊದಲಾದ ಎಲ್ಲ ಧರ್ಮಿಯರೂ ಒಂದಾಗಬೇಕು ಎಂದು ಅವರು ಹೇಳುತ್ತಿದ್ದರು. ಹಿಂದೆ 1893-94ರ ಹಿಂದೂಮುಸ್ಲಿಂ ದಂಗೆಯ ಕಾಲದಲ್ಲಿ ತಿಲಕರನ್ನು ಮುಸ್ಲಿಮರ ವಿರೋಧಿಯೆಂದು ಟೀಕಿಸಿದುದನ್ನು, ಅವರು ಪ್ರಾರಂಭಿಸಿದ ಶಿವಾಜಿ ಗಣೇಶ ಉತ್ಸವಗಳು ಮುಸ್ಲಿಮರ ವಿರುದ್ಧವಾಗಿರುವವುಗಳೆಂದು ಆರೋಪಿಸಿದುದನ್ನು ನಾವು ಕಂಡಿದ್ದೇವೆ. ಈಗ, ತಿಲಕರು ಮುಸ್ಲಿಮರನ್ನು ಸಂತಯಿಸುವುದಕ್ಕಾಗಿ ಅವರಿಗೆ ಕೌನ್ಸಿಲುಗಳಲ್ಲಿ ಹೆಚ್ಚು ಪ್ರಾತಿನಿಧ್ಯ ಕೊಟ್ಟು ಹಿಂದುಗಳನ್ನು ಬಲಿಕೊಡುತ್ತಿದ್ದಾರೆ ಎಂದು ಅನೇಕರು ಆರೋಪಿಸಿದರು.

ರಾಜಕೀಯ ರಂಗದಲ್ಲಿ ದುಡಿಯುವವರಿಗೆ ಇಂತಹ ಆರೋಪ, ಟೀಕೆಗಳು ಹೊಸತಲ್ಲ. ಅದರಲ್ಲಿ ವಿಶೇಷವೂ ಇಲ್ಲ

ಲಕ್ನೋ ಅಧಿವೇಶನದ ಕುರಿತು ಡಾ| ಪಟ್ಟಾಭಿ ಸೀತಾರಾಮಯ್ಯನವರು ಹೀಗೆ ಬರೆಯುತ್ತಾರೆ:

"ಹಿಂದುಗಳ ಮತ್ತು ಮುಸ್ಲಿಮರ ಭ್ರಾತೃತ್ವದ ದೃಷ್ಟಿಯಿಂದ ಹಾಗೂ ಸ್ವಾಯತ್ತ ಸರಕಾರದ ಯೋಜನೆಯೊಂದನ್ನು ರೂಪಿಸಿದ ದೃಷ್ಟಿಯಿಂದ ಕಾಂಗ್ರೆಸಿನ ಲಕ್ನೋ ಅಧಿವೇಶನವು ಅಪೂರ್ವ ಮಹತ್ವದ್ದಾಗಿದೆ. 1907ರಲ್ಲಿ ಪ್ರತ್ಯೇಕವಾದ ಕಾಂಗ್ರೆಸಿನ ಎರಡು ಬಣಗಳು ಪುನರೈಕ್ಯಗೊಂಡುದೂ ಕಡಿಮೆ ಮಹತ್ವದ್ದೇನಲ್ಲ. ತಿಲಕ ಮತ್ತು ಖಪರ್ಡೆಯವರು ಡಾ| ರಾಸ್‌ಬಿಹಾರಿ ಘೋಷ್ ಮತ್ತು ಸುರೇಂದ್ರನಾಥ ಬ್ಯಾನರ್ಜಿಯವರೊಡನೆ ಭುಜಕ್ಕೆ ಭುಜ ತಾಗಿಸಿ ಕುಳಿತಿದ್ದ ಆ ನೋಟ ನೋಡಬೇಕಾದ್ದೆ."

ಲಕ್ನೋದಲ್ಲಿ ನಡೆದ ಒಂದು ಘಟನೆಯನ್ನು ಪಟ್ಟಾಭಿಯವರು ತಮ್ಮ ಕಾಂಗ್ರೆಸಿನ ಇತಿಹಾಸದಲ್ಲಿ ಕೊಟ್ಟಿದ್ದಾರೆ. ಗಾಂಧಿಜಿಗೆ ಸಂಬಂಧಿಸಿದ ಘಟನೆಯಿದು.

ಅಧಿವೇಶನದಲ್ಲಿ ವಿಷಯ ನಿಯಾಮಕ ಸಮಿತಿಗೆ ಸದಸ್ಯರ ಆಯ್ಕೆಯಾಗಬೇಕಷ್ಟೆ. ಕಾಂಗ್ರೆಸಿನ ಘಟನೆಯಂತೆ ಬೇರೆ ಬೇರೆ ಪ್ರಾಂತ್ಯಗಳ ಎ. ಐ. ಸಿ. ಸಿ. ಸದಸ್ಯರು ವಿಷಯ ನಿಯಾಮಕ ಸಮಿತಿಯ ಸದಸ್ಯರಾಗುವರು. ಇಷ್ಟಲ್ಲದೆ ಪ್ರತಿಯೊಂದು ಪ್ರಾಂತ್ಯದಿಂದ ಅಧಿವೇಶನಕ್ಕೆ ಬಂದ ಪ್ರತಿನಿಧಿಗಳು ತಮ್ಮ ತಮ್ಮ ಪ್ರಾಂತ್ಯದಿಂದ ಎಷ್ಟು ಮಂದಿ ಎ. ಐ. ಸಿ. ಸಿ. ಸದಸ್ಯರಿರುವರೋ ಅಷ್ಟು ಮಂದಿಯನ್ನು ತಮ್ಮೊಳಗಿಂದ ಆರಿಸಬೇಕು. ಈ ಆಯ್ಕೆಯಲ್ಲಿ ಉದಾರವಾದಿಗಳಿಗೆ ಮತ್ತು ರಾಷ್ಟ್ರೀಯವಾದಿಗಳಿಗೆ ಯೋಗ್ಯ ಪ್ರಾತಿನಿಧ್ಯ ಸಿಗಬೇಕೆಂಬ ದೃಷ್ಟಿಯಿಂದ ತಿಲಕರು ಉದಾರವಾದಿ ಪಕ್ಷದ ಮುಖಂಡರೊಡನೆ ಒಂದು ಒಡಂಬಡಿಕೆಗೆ ಬರಲು ಪ್ರಯತ್ನಿಸಿದರು. ಆದರೆ ಅವರ ಪ್ರಯತ್ನ ವಿಫಲವಾಯಿತು. ಮುಂಬಯಿ ಪ್ರಾಂತ್ಯದಿಂದ ಅಧಿವೇಶನಕ್ಕೆ ಬಂದ ಹೆಚ್ಚಿನ ಪ್ರತಿನಿಧಿಗಳು ರಾಷ್ಟ್ರೀಯವಾದಿಗಳೆಂದು ಹಿಂದೆ ಹೇಳಿದೆಯಷ್ಟೆ. ತಿಲಕರು ಈಗ ಅವರೊಡನೆ ತಮ್ಮ ಪಕ್ಷದವರನ್ನೇ ವಿಷಯ ನಿಯಾಮಕ ಸಮಿತಿಗೆ ಆರಿಸುವಂತೆ ಕೇಳಿಕೊಂಡರು. ಚುನಾವಣೆ ಪ್ರಾರಂಭವಾಯಿತು. ಒಬ್ಬ ಉದಾರವಾದಿ, ಒಬ್ಬ ರಾಷ್ಟ್ರೀಯವಾದಿ ಹೀಗೆ ಎರಡೆರಡು ಹೆಸರುಗಳನ್ನು ಮತಕ್ಕೆ ಹಾಕಿದರು. ಪ್ರತಿ ಸಂದರ್ಭದಲ್ಲಿಯೂ ರಾಷ್ಟ್ರೀಯವಾದಿಯೇ ಅಧಿಕ ಮತ ದೊರಕಿಸಿಕೊಂಡು ಆಯ್ಕೆ ಹೊಂದಿದ. ಕೊನೆಗೆ ಉದಾರವಾದಿಗಳು ಗಾಂಧಿಜಿಯ ಹೆಸರು ಸೂಚಿಸಿದಾಗ ರಾಷ್ಟ್ರೀಯವಾದಿಗಳು ಅವರಿಗೂ ವಿರೋಧ ಹಾಕಿದರು. ಗಾಂಧಿಜಿ ಸೋತರು. ಆದರೆ ಗಾಂಧಿಜಿ ಮಾತ್ರ ತಿಲಕರು ಚುನಾಯಿತರಾದರೆಂದು ಸಾರಿದರಂತೆ!

ಈ ಘಟನೆ ತಿಲಕರ ವಿಶಾಲ ಮನೋಭಾವವನ್ನು, ಅವರಿಗೆ ಗಾಂಧಿಜಿಯ ಮೇಲಿದ್ದ ಅಭಿಮಾನವನ್ನು ಸೂಚಿಸುತ್ತದೆ.

ಲಕ್ನೋ ಅಧಿವೇಶನದ ಅನಂತರ ತಿಲಕರು ತಮ್ಮ ಪೂರ್ಣ ಶಕ್ತಿಯನ್ನು ಹೋಮ್‌ರೂಲ್ ಪ್ರಚಾರಕ್ಕಾಗಿ ಉಪಯೋಗಿಸಿದರು. ಕಾಂಗ್ರೆಸ್ ಸಮಿತಿಗಳು ಮತ್ತು ವಿವಿಧ ಸಂಘ-ಸಂಸ್ಥೆಗಳು ದೇಶದಾದ್ಯಂತ ಹೋಮ್

ರೂಲ್ ಪ್ರಚಾರದ ಚಳವಳವನ್ನು ಪ್ರಾರಂಭಿಸಬೇಕೆಂದು ಲಕ್ನೋ ಅಧಿವೇಶನ ಕರೆಕೊಟ್ಟಿತ್ತು. ಈ ಕರೆಗೆ ಜನತೆಯಿಂದ ಪ್ರಚಂಡ ಸ್ವಾಗತ ದೊರೆಯಿತು. ಪ್ರಚಾರ ಕಾರ್ಯದಲ್ಲಿ ಬೇರೆ ಬೇರೆ ಪ್ರಾಂತ್ಯಗಳು ತಾನು ಮುಂದು ತಾನು ಮುಂದು ಎಂಬಂತೆ ಸ್ಪರ್ಧೆಗಿಳಿದುವು. ತಿಲಕರು ಮಹಾರಾಷ್ಟ್ರದಲ್ಲೆಲ್ಲ ಸಂಚರಿಸಿ ಮೂಲೆ ಮೂಲೆಗೂ ಹೋಮ್‌ರೂಲ್ ಮಂತ್ರವನ್ನು ಮುಟ್ಟಿಸಿದರು. ಇಂದು ಬೆಳಗಾಂವಿಯಲ್ಲಾದರೆ ನಾಳೆ ಸೊಲ್ಲಾಪುರದಲ್ಲಿ; ಮತ್ತೊಂದು ದಿನ ಸತಾರದಲ್ಲಿ; ಇನ್ನೊಂದು ದಿನ ಪೂನದಲ್ಲಿ. ಕಡಿಮೆಯೆಂದರೆ ಅವರು ನೂರು ಹೋಮ್‌ರೂಲ್ ಭಾಷಣಗಳನ್ನಾದರೂ ಮಾಡಿದ್ದರಂತೆ. ಅವರ ಭಾಷಣಗಳನ್ನು ಕೇಳಲು ನಾಲ್ಕು ಸಾವಿರದಿಂದ ಇಪ್ಪತ್ತು ಸಾವಿರದ ವರೆಗೆ ಜನ ಸೇರುತ್ತಿದ್ದರು. ಆಗಿನ ಕಾಲದಲ್ಲಿ ಬೇರೆ ಯಾವನೇ ಮುಖಂಡನ ಭಾಷಣ ಕೇಳಲು ಇಷ್ಟು ಸಂಖ್ಯೆಯಲ್ಲಿ ಜನ ಸೇರುತ್ತಿರಲಿಲ್ಲ ಎಂಬುದನ್ನು ಸ್ಮರಿಸಿಕೊಂಡರೆ ತಿಲಕರಿಗೆ ಜನತೆಯ ಮೇಲಿದ್ದ ಪ್ರಭಾವದ ಅರಿವಾಗಬಹುದು. ಜನತೆಯ ಬೆಳೆಯುತ್ತಿದ್ದ ಉತ್ಸಾಹಕ್ಕೆ ತಣ್ಣೀರೆರಚಲು, ರಭಸದಿಂದ ಹರಿಯುತ್ತಿದ್ದ ಹೋಮ್‌ರೂಲ್ ಚಳವಳದ ಪ್ರವಾಹವನ್ನು ತಡೆಯಲು ಸರಕಾರ ಈಗ ಮುಂದೆ ಬಂದಿತು. ರಾಜಕೀಯ ಸಭೆಗಳಲ್ಲಿ, ಮುಖ್ಯವಾಗಿ ಹೋಮ್‌ರೂಲ್ ಸಭೆಗಳಲ್ಲಿ, ವಿದ್ಯಾರ್ಥಿಗಳು ಭಾಗವಹಿಸಬಾರದೆಂದು ಆದೇಶಗಳು ಹೊರಟುವು. ಜನ ಚಳವಳದಲ್ಲಿ ಸೇರಬಾರದೆಂದು ಅಧಿಕಾರಿಗಳು ವಿನಂತಿಸಿದರು; ಸೇರಿದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ ಎಂದು ಬೆದರಿಕೆ ಹಾಕಿದರು. ಮಹಾರಾಷ್ಟ್ರವನ್ನು ಬಿಟ್ಟರೆ ಮದ್ರಾಸಿಗೆ ಹೋಮ್‌ರೂಲ್ ಚಳವಳದಲ್ಲಿ ಅಗ್ರಪಟ್ಟ. ಅಲ್ಲಿ ಶ್ರೀಮತಿ ಅನ್ನಿ ಬಿಸೆಂಟರೇ ಚಳವಳದ ನಾಯಕತ್ವವನ್ನು ವಹಿಸಿದ್ದರು. ಅವರ ಬಾಯಿ ಮುಚ್ಚಿಸಿದರೆ ಅಲ್ಲಿ ಚಳವಳವನ್ನು ಮುರಿಯಬಹುದೆಂದು ಸರಕಾರ ಯೋಚಿಸಿ, ಅವರನ್ನು ಹಾಗೂ ಅವರ ಇಬ್ಬರು ಸಹೋದ್ಯೋಗಿಗಳಾದ ಅರಂಡಲೆ ಮತ್ತು ವಾಡಿಯಾ ಇವರನ್ನು ಸ್ಥಾನಬದ್ಧತೆಯಲ್ಲಿರಿಸಿತು. ಹಿಂದೆ ತಿಲಕರ ಮೇಲೆ ಮುಂಬಯಿ ಸರಕಾರ ಮಾಡಿದ ವಿಫಲ ಪ್ರಯತ್ನವನ್ನು ನಾವು ಈಗಾಗಲೇ ಕಂಡಿದ್ದೇವೆ.

ಅನ್ನಿ ಬಿಸೆಂಟರ ಸ್ಥಾನಬದ್ಧತೆಯಿಂದ ಹೋಮ್‌ರೂಲ್ ಚಳವಳ ಮುರುಟಿ ಹೋಗುವುದರ ಬದಲು ಚಳವಳಕ್ಕೆ ಇಮ್ಮಡಿ ಶಕ್ತಿ ಬಂತು.

ಶ್ರೀಮತಿ ಬಿಸೆಂಟರ ಬಿಡುಗಡೆಗಾಗಿ ಮನವಿ, ಪ್ರಾರ್ಥನೆಗಳನ್ನು ಮಾಡಿಕೊಳ್ಳುವುದರಲ್ಲಷ್ಟೇ ತಿಲಕರಿಗೆ ತೃಪ್ತಿಯಿರಲಿಲ್ಲ. ಅವರಿಗೆ ಮಾಡಬಹುದಾದ ಅತ್ಯುಚ್ಚ ಗೌರವವೆಂದರೆ ಅವರನ್ನು ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿ ಆರಿಸುವುದು. ಬಿಸೆಂಟರ ಬಿಡುಗಡೆಯಾಗಲಿ, ಆಗದಿರಲಿ, ಅವರನ್ನು ಮುಂದಿನ ಅಧಿವೇಶನದ ಅಧ್ಯಕ್ಷರಾಗಿ ಆರಿಸಬೇಕು—ಎಂದು ತಿಲಕರು ಹೇಳಿದರು. ತಿಲಕರ ಪ್ರಾರ್ಥನೆಯಂತೆ ಹೆಚ್ಚಿನ ಪ್ರಾಂತ ಸಮಿತಿಗಳು ಬಿಸೆಂಟರ ಹೆಸರನ್ನೇ ಅಧ್ಯಕ್ಷ ಸ್ಥಾನಕ್ಕೆ ಸೂಚಿಸಿದುವು ಉದಾರವಾದಿಗಳ ವಿರೋಧವಿದ್ದರೂ ಶ್ರೀಮತಿ ಬಿಸೆಂಟರು 1917ರ ಕಲ್ಕತ್ತಾ ಅಧಿವೇಶನದ ಅಧ್ಯಕ್ಷರಾಗಿ ಚುನಾಯಿತರಾದರು.

ಅಹಿಂಸಾತ್ಮಕ ಪ್ರತಿಭಟನೆಯ ಕುರಿತು ವಿವಿಧ ಪ್ರಾಂತ ಸಮಿತಿಗಳು ಆಗಲೇ ತಮ್ಮ ಅಭಿಪ್ರಾಯ ಪ್ರಕಟಿಸಿದ್ದುವು. ಆ ಕುರಿತು ಎಲ್ಲರಲ್ಲಿಯೂ ಒಮ್ಮತವಿರಲಿಲ್ಲ. ಅಕ್ಟೋಬರದಲ್ಲಿ ಅಲ್ಲಹಾಬಾದಿನಲ್ಲಿ ಸೇರಿದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಮತ್ತು ಮುಸ್ಲಿಂ ಲೀಗ್ ಸಮಿತಿಯ ಜಂಟಿ ಅಧಿವೇಶನದಲ್ಲಿ ಈ ಯೋಜನೆಯನ್ನೇ ಬಿಟ್ಟುಕೊಡಲಾಯಿತು ಸ್ವತಃ ಶ್ರೀಮತಿ ಬಿಸೆಂಟರೇ ಅಹಿಂಸಾತ್ಮಕ ಪ್ರತಿಭಟನೆಗೆ ವಿರೋಧವಾಗಿದ್ದರು.

ಇಷ್ಟರಲ್ಲಿ ದೇಶದ ರಾಜಕೀಯ ಸ್ಥಿತಿಯಲ್ಲಿ ಕೆಲವೊಂದು ಬದಲಾವಣೆಗಳಾಗಿದ್ದುವು. ರಾಜ್ಯಕಾರ್ಯದರ್ಶಿ ಮೊಂಟೆಗ್ಯೂ ರಾಜಕೀಯ ಸುಧಾರಣೆಗಳ ಕುರಿತು ಅಭ್ಯಾಸ ಮಾಡಲು ಭಾರತವನ್ನು ಸಂದರ್ಶಿಸುವರೆಂದ ಬ್ರಿಟಿಷ್ ಪ್ರಭುತ್ವ ಸಾರಿತ್ತು. ಸರಕಾರದ ಹೊಸ ಧೋರಣೆಗನುಸಾರವಾಗಿ ಶ್ರೀಮತಿ ಬಿಸೆಂಟರೂ ಬಿಡುಗಡೆ ಹೊಂದಿದ್ದರು. ಹೆಚ್ಚಿನ ಮುಖಂಡರ ಮನಸ್ಸು ಅಹಿಂಸಾತ್ಮಕ ಪ್ರತಿಭಟನೆಯಿಂದ ಮುಂಬರುವ ರಾಜಕೀಯ ಸುಧಾರಣೆಗಳ ಕಡೆಗೆ ಹೊರಳಿತ್ತು.

ಮೊಂಟೆಗ್ಯೂ ಸಂದರ್ಶನದಿಂದ ತಿಲಕರ ರಾಜಕೀಯ ಧೋರಣೆಯಲ್ಲಿ ವಿಶೇಷ ಬದಲಾವಣೆಯಾಗಲಿಲ್ಲ. ಮೊಂಟೆಗ್ಯೂ ಅವರು ಸುಧಾರಣೆಯ ಕೆಲವು ಶಿಫಾರಸುಗಳನ್ನು ಮಾಡಬಹುದಾಗಿದ್ದರೂ, ಭಾರತದ ಮತ್ತು ಇಂಗ್ಲಂಡಿನ ಕೆಲವೊಂದು ಪ್ರತಿಗಾಮಿ ಶಕ್ತಿಗಳ ಕೈವಾಡದಿಂದಾಗಿ ಅವುಗಳ ಪೂರ್ಣ ಪ್ರಯೋಜನ ಜನತೆಗೆ ಸಿಗದಂತಾಗಬಹುದು ಎಂದು ಅವರು ಭಾವಿಸಿದ್ದರು. ಆದುದರಿಂದ ರಾಜ್ಯಕಾರ್ಯದರ್ಶಿಗಳೊಡನೆ

ಸಹಕರಿಸುವುದರೊಡನೆಯೇ ಆಳವಳವೂ ಮುಂದುವರಿಯಬೇಕೆಂದು ಅವರು ಹೇಳಿದರು. ಭಾರತದಲ್ಲಷ್ಟೇ ಅಲ್ಲ, ಇಂಗ್ಲಂಡಿನಲ್ಲಿಯೂ ಹೋಮ್ ರೂಲ್‌ನ ಪ್ರಚಾರವಾಗಬೇಕು. ಪ್ರಜಾಸತ್ತೆಯಲ್ಲಿ ವಿಶ್ವಾಸವಿರುವ ಬ್ರಿಟಿಷ್ ಜನತೆಗೆ ಭಾರತೀಯರ ಬೇಡಿಕೆಯ ನ್ಯಾಯದ ಮನವರಿಕೆ ಮಾಡಿ ಕೊಡಬೇಕು ಎಂದು ತಿಲಕರು ಇಚ್ಛಿಸಿದರು. ಅದಕ್ಕಾಗಿ ಇಂಗ್ಲಂಡಿಗೆ ಹೋಮ್‌ರೂಲ್ ಲೀಗ್ ಆಯೋಗವೊಂದನ್ನು ಕಳುಹಿಸುವ ಯೋಜನೆ ಹಾಕಿದರು. ಉದಾರವಾದಿಗಳು ತಿಲಕರ ಧೋರಣೆಗೆ ವಿರೋಧ ವಾಗಿದ್ದರು.

ಕಲ್ಕತ್ತಾ ಕಾಂಗ್ರೆಸ್ ಶ್ರೀಮತಿ ಬಿಸೆಂಟರ ಅಧ್ಯಕ್ಷತೆಯಲ್ಲಿ ಜರ ಗಿತು. ಮೊಂಟೆಗ್ಯೂ ಸಂದರ್ಶನ ಕಾಂಗ್ರೆಸಿನೊಳಗೆ ಉಲ್ಲೋಲ ಕಲ್ಲೋಲ ವನ್ನೆಬ್ಬಿಸಿತ್ತು. ಲಕ್ನೋ ಅಧಿವೇಶನದಲ್ಲಿ ಸ್ವೀಕರಿಸಿದ ಕಾಂಗ್ರೆಸ್-ಲೀಗ್ ಜವಾಬ್ದಾರಿ ಸರಕಾರದ ಯೋಜನೆಯಲ್ಲಿ ಈಗ ಬದಲಾವಣೆಗಳನ್ನು ಮಾಡಬೇಕೆಂದು ಕೆಲವರು ವಾದಿಸಿದರು. ತಿಲಕರು ಇದನ್ನು ಬಲವಾಗಿ ವಿರೋಧಿಸಿದರು. ಸರಕಾರದ ಸುಧಾರಣಾ ಯೋಜನೆ ಪ್ರಕಟವಾಗುವ ವರೆಗೆ ನಾವು ಕಾಂಗ್ರೆಸ್ ಲೀಗ್ ಯೋಜನೆಗೆ ಅಂಟಿಕೊಳ್ಳಬೇಕು. ಈಗ ಅದಕ್ಕೆ ಬಹುಜನರ ಬೆಂಬಲವಿದೆ. ಸರಕಾರದ ಯೋಜನೆ ಪ್ರಕಟವಾದ ಮೇಲೆ ಅವರ ಬೆಳಕಿನಲ್ಲಿ ಕಾಂಗ್ರೆಸ್-ಲೀಗ್ ಯೋಜನೆಯಲ್ಲಿ ಬದಲಾವಣೆ ಗಳನ್ನು ಮಾಡಬೇಕೋ ಬೇಡವೋ ಎಂಬುದನ್ನು ನಿರ್ಣಯಿಸಲು ಸಾಕಷ್ಟು ಅವಕಾಶವಿದೆ ಎಂದು ತಿಲಕರು ಹೇಳಿದರು. ಕಾಂಗ್ರೆಸ್-ಲೀಗ್ ಯೋಜನೆಗೆ ಪುನಃ ಒಪ್ಪಿಗೆಯ ಮುದ್ರೆ ಬಿತ್ತು.

ಉದಾರವಾದಿಗಳು ಹೆಚ್ಚು ಹೆಚ್ಚಾಗಿ ಸರಕಾರದ ಕಡೆಗೆ ಒಲಿಯು ತ್ತಿದ್ದರು. ಸರಕಾರ ಯಾವ ಸುಧಾರಣೆಗಳನ್ನು ತಂದರೂ ಅವುಗಳಿಗೆ ಬೆಂಬಲವೀಯುವ ಧೋರಣೆ ಅವರದಾಗಿತ್ತು. ಕಾಂಗ್ರೆಸಿನಲ್ಲಿ ತಮ್ಮ ಬೇಳೆ ಬೇಯುವುದಿಲ್ಲವೆಂದು ತಿಳಿದಾಗ ಅವರು ಒಬ್ಬೊಬ್ಬರಾಗಿ ಸಂಸ್ಥೆ ಯನ್ನು ತ್ಯಜಿಸಲು ಪ್ರಾರಂಭಿಸಿದರು. 1918ರಲ್ಲಿ ಅನೇಕರು ಉದಾರ ವಾದಿ ಮುಖಂಡರು ಕಾಂಗ್ರೆಸ್ ಬಿಟ್ಟು 'ಲಿಬರಲ್ ಫೆಡರೇಶನ್' ಎಂಬ ಹೊಸ ಪಕ್ಷವನ್ನು ಕಟ್ಟಿಕೊಂಡರು. ತಿಲಕರು ಕಾಂಗ್ರೆಸಿನಲ್ಲಿ ಐಕ್ಯ ಕಾಪಾಡಿಕೊಳ್ಳಬೇಕೆಂದು ಪಟ್ಟ ಪ್ರಯತ್ನಗಳೆಲ್ಲ ವಿಫಲವಾದುವು.

ಮೊಂಟೆಗ್ಯೂ ಅವರ ಸಂದರ್ಶನದ ಫಲವಾಗಿ ಮೊಂಟೆಗ್ಯೂ-ಚೆಮ್ಸ್‌ಫೋರ್ಡ್ ವರದಿ 1918ನೇ ಜೂನ್ ತಿಂಗಳಿನಲ್ಲಿ ಪ್ರಕಟವಾಯಿತು. ಚೆಮ್ಸ್‌ಫೋರ್ಡ್ ಆಗ ಭಾರತದಲ್ಲಿ ವೈಸರಾಯ್ ಆಗಿ ಇದ್ದವರು. ಈ ವರದಿಯನ್ನು ಮೋಂಟ್‌ಫೋರ್ಡ್ ವರದಿ ಎಂದೂ ಕರೆಯುತ್ತಾರೆ. ಈ ವರದಿಯಲ್ಲಿ ಸ್ವಾಯತ್ತ ಸರಕಾರವನ್ನು ಪಡೆಯಲು ಭಾರತದ ಅರ್ಹತೆಯ ನಿಷ್ಪಕ್ಷ ಪ್ರತಿಪಾದನೆಯೇನೋ ಇದೆ. ಅದೇ ಸಮಯದಲ್ಲಿ ಸುಧಾರಣೆಗಳಿಗಿರುವ ಎಡರು ತೊಡರುಗಳನ್ನೂ ಅಷ್ಟೇ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ವರದಿಯನ್ನು ಪೂರ್ಣ ಓದಿದಾಗ ಎದ್ದು ಕಾಣುವುದು ಈ ಎಡರು ತೊಡರುಗಳೇ!

---

# ೧೨

# ವಿದೇಶದಲ್ಲಿ

ಹೋಮ್‌ರೂಲ್ ಆಯೋಗವೊಂದನ್ನು ಇಂಗ್ಲಂಡಿಗೆ ಕಳುಹಿಸಬೇಕೆಂದು ತಿಲಕರು ಯೋಜನೆ ಹಾಕುತ್ತಿದ್ದರೆಂದು ಹಿಂದೆ ಹೇಳಿದೆ. ಈ ಆಯೋಗ ಕಾಂಗ್ರೆಸಿನ ಪರವಾಗಿಯೇ ಹೋಗಬೇಕೆಂಬುದು ತಿಲಕರ ಇಚ್ಛೆಯಾಗಿದ್ದಿತು. ಆದರೆ ಇದಕ್ಕೆ ಉದಾರವಾದಿಗಳ ವಿರೋಧವಿದ್ದುದರಿಂದ ಕಾಂಗ್ರೆಸನ್ನು ಒಪ್ಪಿಸುವುದು ತಿಲಕರಿಗೆ ಸುಲಭವಿರಲಿಲ್ಲ. ಬ್ರಿಟಿಷ್ ಸರಕಾರ ಜರ್ಮನಿಯೊಡನೆ ಜೀವನ್ಮರಣ ಹೋರಾಟದಲ್ಲಿ ತೊಡಗಿರುವಾಗ ಅಲ್ಲಿ ಹೋಗಿ 'ಉಪಟಳ ಕೊಡುವುದು' ಸರಿಯಲ್ಲವೆಂದು ಉದಾರವಾದಿಗಳ ಅಭಿಪ್ರಾಯವಾಗಿದ್ದಿತು. ಆದರೆ ತಿಲಕರು ಹಾಗೆ ತಿಳಿದಿರಲಿಲ್ಲ. ಬ್ರಿಟಿಷ್ ಪ್ರಭುತ್ವದ ಮನವೊಲಿಸಿಕೊಳ್ಳಲು ಇದುವೇ ತಕ್ಕ ಸಮಯವೆಂದು ಅವರು ಭಾವಿಸಿದ್ದರು. ಕಬ್ಬಿಣ ಕಾದಿರುವಾಗಲೇ ಅದನ್ನು ಬಡಿದು ಹದಗೊಳಿಸಬೇಕು. ಭಾರತದ ಜನತೆಯ ಆಶೋತ್ತರಗಳನ್ನು ಈಡೇರಿಸುವುದರಿಂದ ಬ್ರಿಟಿಷ್ ಸರಕಾರ ಭಾರತದ ಬೆಂಬಲವನ್ನು ಪಡೆಯಬಹುದು; ತನ್ನನ್ನು ರಕ್ಷಿಸಿಕೊಳ್ಳಲೂ ಬಹುದು ಎಂದು ತಿಲಕರು ಹೇಳಿದರು. ಇದೇ ಅಭಿ

ಪ್ರಾಯವನ್ನು ಇಂಗ್ಲಂಡಿನ ಜನತೆಗೆ ತಿಳಿಯ ಹೇಳಬೇಕು; ಬ್ರಿಟಿಷ್ ಪ್ರಭುತ್ವ ಹೇಗೆ ಭಾರತದ ಜನತೆಯನ್ನು ತನ್ನ ಮುಷ್ಟಿಯೊಳಗೆ ಇಟ್ಟು ಕೊಂಡಿದೆ, ಸ್ವರಾಜ್ಯಕೊಟ್ಟರೆ ಅದರಿಂದ ಇಂಗ್ಲಿಷರಿಗೂ ಹೇಗೆ ಪ್ರಯೋಜನ ವಾಗಬಹುದು ಎಂಬುದನ್ನು ಬ್ರಿಟಿಷ್ ಪ್ರಜಾಸತ್ತೆಗೆ ವಿವೇಚಿಸಿ ಹೇಳಿ ಅವರ ಸಹಾನುಭೂತಿ ಪಡೆಯಬೇಕು. ಆಯೋಗವೊಂದನ್ನು ಇಂಗ್ಲಂಡಿಗೆ ಕಳುಹಿಸುವುದರಲ್ಲಿ ಇದು ತಿಲಕರ ಉದ್ದೇಶವಾಗಿದ್ದಿತು. ಆಯೋಗ ವನ್ನು ಕಳುಹಿಸಲು ಕಾಂಗ್ರೆಸಿನ ಒಪ್ಪಿಗೆ ಪಡೆಯುವುದರಲ್ಲೇನೋ ತಿಲಕರ ಪ್ರಯತ್ನ ಸಫಲವಾಯಿತು. ಆದರೆ ಒಂದಲ್ಲ ಒಂದು ಕಾರಣದಿಂದ ದಿನ ಮುಂದೆ ಹೋಗುತ್ತಿದ್ದಿತು. ಕೊನೆಗೆ ತಿಲಕರು ಮತ್ತು ಬೆಸೆಂಟರು ತಮ್ಮ ಹೋಮ್‌ರೂಲ್ ಲೀಗ್‌ಗಳ ಪರವಾಗಿ ಆಯೋಗವೊಂದನ್ನು ಕಳುಹಿಸಲು ನಿರ್ಧರಿಸಿದರು. ಅದಕ್ಕೆ ಮೊದಲೇ ತಿಲಕರು ತಮ್ಮ ಬಲ ಗೈಯಂತಿದ್ದ ಬಾಪ್ಟಿಸ್ಟ ಎಂಬವರನ್ನು ಇಂಗ್ಲಂಡಿಗೆ ಕಳುಹಿಸಿದ್ದರು. ಅವರ ಪ್ರಯತ್ನದಿಂದ ಭಾರತದ ಕೇಳಿಕೆಗಳಿಗೆ ಲೇಬರ್ ಪಕ್ಷದ ಸಹಾನು ಭೂತಿ ದೊರೆತಿದ್ದಿತು.

ಆಯೋಗವನ್ನು ಕಳುಹಿಸಬೇಕಾದರೆ ಅಪಾರ ಹಣಬೇಕು. ತಿಲಕ ರಿಗೆ ಬೇಕಾದಷ್ಟು ಹಣವನ್ನು ಭಂಡವಾಳಶಾಹಿ ವರ್ಗದಿಂದ ಪಡೆಯು ವುದೇನೂ ಕಷ್ಟವಿರಲಿಲ್ಲ. ಆದರೆ ಅಂತಹ ಹಣ ಬೇಕಿರಲಿಲ್ಲ. ಹಣ ವಂತರು ಕೊಡುವ ದೊಡ್ಡ ಸಹಾಯಗಳಿಗಿಂತಲೂ ಸಾಮಾನ್ಯರು ಕೊಡುವ ಚಿಕ್ಕ ಪುಟ್ಟ ಸಹಾಯಗಳ ಮೇಲೆಯೇ ಅವರಿಗೆ ಮನಸ್ಸು. "ಒಬ್ಬನ ಒಂದು ರುಪಾಯಿಗಿಂತ ಹತ್ತಾರು ಜನರು ಕೊಡುವ ಅರುವತ್ತನಾಲ್ಕು ಕಾಲಾಣೆಗಳ ಮೇಲೆಯೇ ನನಗೆ ಇಚ್ಛೆ" ಎಂದು ಅವರು ಹೇಳುತ್ತಿದ್ದರು. ಇದೇ ಆದರ್ಶವನ್ನಿಟ್ಟುಕೊಂಡು ತಿಲಕರು ಧನಸಂಗ್ರಹಕ್ಕೆ ಹೊರಟರು. ದೇಶದ ಹಲವಾರು ಭಾಗಗಳನ್ನು ಸುತ್ತಾಡಿದರು. ಮೂರೇ ಮೂರು ವಾರಗಳೊಳಗೆ ಒಂದುವರೆ ಲಕ್ಷ ರುಪಾಯಿಗಳು ಅವರ ಕೈಸೇರಿದುವು. ಧನಸಂಗ್ರಹದೊಡನೆ ಪ್ರಚಾರ ಕಾರ್ಯವೂ ಸಾಕಷ್ಟು ನಡೆಯಿತು.

ಧನಸಂಗ್ರಹಕ್ಕಾಗಿ ಮತ್ತು ಹೋಮ್‌ರೂಲ್ ಪ್ರಚಾರಕ್ಕಾಗಿ ತಿಲ ಕರು ಸಾವಿರಾರು ಮೈಲುಗಳ ಪ್ರಯಾಣ ಮಾಡಬೇಕಾಗಿದ್ದಿತು. ಮೊದಲೇ ಪ್ರಾಯಸಂದ ಶರೀರ; ಅದರ ಮೇಲೆ ಹಲವಾರು ವರ್ಷ

ಸೆರೆಮನೆಯಲ್ಲಿದ್ದ ಕಾರಣದಿಂದ ತಗಲಿಕೊಂಡ ಅನಾರೋಗ್ಯ. ಇದರಿಂದಾಗಿ ಅವರ ಬೆಂದ ದೇಹಕ್ಕೆ ಬಹಳ ಶ್ರಮವಾಗುತ್ತಿತ್ತು. ಕೆಲವೊಮ್ಮೆ ಸಭೆಯಲ್ಲಿ ಭಾಷಣ ಮಾಡುವ ಕೆಲಸ ಮುಗಿದೊಡನೆಯೇ ಹೋಗಿ ಮಲಗಿ ಬಿಡುತ್ತಿದ್ದರು. ದೇಶ ಪ್ರೇಮದ ಇಚ್ಛಾಶಕ್ತಿಯೊಂದೇ ಅವರನ್ನು ಮುಂದೊತ್ತುವಂತೆ ಮಾಡುತ್ತಿತ್ತು.

ಆಯೋಗ ಹೋಗಲು ಸಿದ್ಧತೆಗಳೆಲ್ಲ ನಡೆದಿದ್ದುವು. ಸದಸ್ಯರು ಕೊಲೊಂಬೋದ ವರೆಗೂ ಹೋಗಿದ್ದರು ಆದರೆ ಅಲ್ಲಿಂದ ಮುಂದುವರಿಯಲು ಅವರಿಗೆ ಸರಕಾರದ ಅನುಮತಿ ದೊರೆಯಲಿಲ್ಲ. ಹೋದವರು ಅಲ್ಲಿಂದಲೇ ಹಿಂದಿರುಗಬೇಕಾಯಿತು. ಆದರೆ ತಿಲಕರು ಇನ್ನೊಂದು ಕೆಲಸದಿಂದ ಇಂಗ್ಲಂಡಿಗೆ ಹೋಗಬೇಕಾಗಿತ್ತು. ಸರ್ ವೆಲೆಂಟೈನ್ ಚಿರೋಲ್ ಎಂಬವರ ಮೇಲೆ ಅವರು ಇಂಗ್ಲಂಡಿನಲ್ಲಿ ಮಾನನಷ್ಟದ ದಾವೆಯೊಂದನ್ನು ಹೂಡಿದ್ದರು. ಅದರ ವಿಚಾರಣೆ ಸದ್ಯದಲ್ಲೇ ನಡೆಯುವುದಿತ್ತು.

ಸರ್ ಚಿರೋಲರನ್ನು ಲಂಡನಿನ 'ಟಾಯಿಮ್ಸ್' ಪತ್ರಿಕೆ ಭಾರತದ ರಾಜಕೀಯ ಸ್ಥಿತಿಯನ್ನು ಪರಿಶೀಲಿಸಿ ವರದಿಮಾಡಲು 1910ರಲ್ಲಿ ಇಲ್ಲಿ ಕಳುಹಿಸಿತ್ತು. ಚಿರೋಲರ ಪರಿಶೀಲನೆಯ ಫಲವಾಗಿ 'ಇಂಡಿಯನ್ ಅನ್‌ರೆಸ್ಟ್' ಎಂಬ ಪುಸ್ತಕ ಪ್ರಕಟವಾಯಿತು. ಈ ಗ್ರಂಥದಲ್ಲಿ ಅವರು ನೌಕರಶಾಹಿಯ ದಬ್ಬಾಳಿಕೆ–ಮರ್ದನಗಳನ್ನು ಸಮರ್ಥಿಸಿ, ಸ್ವಾಯತ್ತ ಸರಕಾರವನ್ನು ಪಡೆಯಲು ಭಾರತದ ಹಕ್ಕನ್ನು ಎಂದೂ ಮಾನ್ಯ ಮಾಡುವುದು ಸಾಧ್ಯವಿಲ್ಲ ಎಂಬ ನಿರ್ಣಯವನ್ನು ಕೊಟ್ಟಿದ್ದರು! ಅಷ್ಟೇ ಅಲ್ಲ; ಇಲ್ಲಿಯ ರಾಷ್ಟ್ರೀಯ ಚಳವಳದ ಮೇಲೆ - ಮುಖ್ಯವಾಗಿ ಲೋಕಮಾನ್ಯ ತಿಲಕರ ಮತ್ತು ಅವರ ಪಕ್ಷದ ಮೇಲೆ - ಗಂಭೀರ ಸ್ವರೂಪದ ಹಲವಾರು ದೋಷಾರೋಪಣೆಗಳನ್ನೂ ಮಾಡಿದ್ದರು. ತಿಲಕರು ಈ ದೋಷಾರೋಪಣೆಗಳ ವಿರುದ್ಧ, ತಮ್ಮ ನಿಷ್ಕಲಂಕ ಚಾರಿತ್ರ್ಯಕವನ್ನು ಸಿದ್ಧಮಾಡಿ ತೋರಿಸುವುದಕ್ಕೋಸ್ಕರ, ಇಂಗ್ಲಂಡಿನಲ್ಲಿ ಚಿರೋಲರ ಮೇಲೆ ಮಾನನಷ್ಟದ ದಾವೆಯನ್ನು ಹೂಡಿದ್ದರು.

ಸರಕಾರ ಲೋಕಮಾನ್ಯರಿಗೆ ಇಂಗ್ಲಂಡಿಗೆ ಹೋಗಲು ಅನುಮತಿ ಕೊಟ್ಟಿತು. ಆದರೆ ಅದರ ಮೊದಲು ಅವರ ಬಾಯಿಗೆ ಬೀಗ ಹಾಕದೆ

ಬಿಡಲಿಲ್ಲ. ಇಂಗ್ಲಂಡಿಗೆ ಹೊರಡುವ ಮೊದಲು ಅವರು ತಾವು ಅಲ್ಲಿ ಯಾವುದೇ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡುವುದಿಲ್ಲವೆಂದು ಬರೆದು ಕೊಡಬೇಕೆಂಬ ಶರತ ಹಾಕಿತು. ಎರಡು ತಿಂಗಳುಗಳ ಮೊದಲು, ಅವರು ಭಾರತದಲ್ಲಿ ಸಾರ್ವಜನಿಕ ಭಾಷಣಗಳನ್ನು ಮಾಡುವ ಪೂರ್ವದಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟರ ಒಪ್ಪಿಗೆ ಪಡೆಯಬೇಕೆಂದು ಸರಕಾರ ನಿರ್ಬಂಧಿಸಿತ್ತು. ತಿಲಕರು ಈಗ ಉಪಾಯವಿಲ್ಲದೆ, ತಾವು ಇಂಗ್ಲಂಡಿನಲ್ಲಿ ಸಾರ್ವಜನಿಕ ಭಾಷಣಗಳನ್ನು ಮಾಡುವುದಿಲ್ಲವೆಂದು ಬರೆದುಕೊಟ್ಟರು. ಆದರೆ ಅವರೊಡನೆ ತಮ್ಮ ನಿಷೇಧವನ್ನೂ ಪ್ರಕಟಿಸದೆ ಇರಲಿಲ್ಲ. ಇಂಗ್ಲಂಡಿಗೆ ಹೋದ ಮೇಲೆ ತಿಲಕರು ಮಾಡಿದ ಮೊದಲ ಕಾರ್ಯವೆಂದರೆ ತಮ್ಮ ಮೇಲಿನ ನಿರ್ಬಂಧವನ್ನು ತೆಗೆದು ಹಾಕಿಸಿದುದು

ಇಂಗ್ಲಂಡಿನಲ್ಲಿ ತಿಲಕರು ಭಾಷಣಗಳ ಮೂಲಕ, ಪತ್ರಿಕೆ ಪ್ರಕಾಶನಗಳ ಮೂಲಕ ಹೋಮ್‌ರೂಲ್‌ನ ಪ್ರಚಾರ ಮಾಡಿದರು. ಲೇಬರ್ ಹಾಗೂ ಲಿಬರಲ್ ಪಕ್ಷಗಳ ಧುರೀಣರನ್ನು ಕಂಡು ಹೋಮ್‌ರೂಲ್ ಚಳವಳಕ್ಕೆ ಅವರ ಬೆಂಬಲ ಸಹಾನುಭೂತಿಗಳನ್ನು ಪಡೆದರು. ಅವರ ಶ್ರಮದ ಫಲವಾಗಿ 1918ರಲ್ಲಿ ಜರಗಿದ ಲೇಬರ್ ಪಕ್ಷದ ಸಮ್ಮೇಳನದಲ್ಲಿ, ಭಾರತವು ಸ್ವರಾಜ್ಯ ಪಡೆಯುವಂತೆ ಸಾಧ್ಯವಿದ್ದ ಪ್ರಯತ್ನ ಮಾಡುವ ಆಶ್ವಾಸನೆಯನ್ನು ಕೊಡುವ ನಿರ್ಣಯವಾಯಿತು. ಅಲ್ಲದೆ ಲೇಬರ್ ಪಕ್ಷದ ಧುರೀಣರು, ಮೋಂಟ್‌ಫೋರ್ಡ್ ವರದಿಯ ಫಲವಾಗಿ ಬ್ರಿಟಿಷ್ ಸರಕಾರ ಪಾರ್ಲಿಮೆಂಟಿನಲ್ಲಿ ತಂದ ಗವರ್ನಮೆಂಟ್ ಆಫ್ ಇಂಡಿಯಾ ಮಸೂದೆಗೆ ತಿದ್ದುಪಡಿಗಳನ್ನು ತರುವುದಾಗಿಯೂ ಹೇಳಿದರು.

ಇಂಗ್ಲಿಷ್ ಜನರಲ್ಲಿ ಭಾರತದ ಕುರಿತು ಪ್ರಚಾರ ಮಾಡಲು ಬ್ರಿಟಿಷ್ ಕಾಂಗ್ರೆಸ್ ಸಮಿತಿ ಎಂಬ ಸಂಸ್ಥೆ ಇಂಗ್ಲಂಡಿನಲ್ಲಿತ್ತು. ಈ ಸಂಸ್ಥೆಯ ಅಂಗವಾಗಿ 'ಇಂಡಿಯಾ' ಎಂಬ ಪತ್ರಿಕೆಯೂ ನಡೆಸಲ್ಪಡುತ್ತಿತ್ತು. ತಿಲಕರು ಇಂಗ್ಲಂಡಿಗೆ ಹೋದ ಸಂದರ್ಭದಲ್ಲಿ ಈ ಸಂಸ್ಥೆಯಲ್ಲಿ ಯಾವ ವ್ಯವಸ್ಥೆಯೂ ಇರಲಿಲ್ಲ. ಭಾರತದಲ್ಲಿ ಉದಾರವಾದಿಗಳು ಕಾಂಗ್ರೆಸನ್ನು ತ್ಯಜಿಸಿದ್ದರೂ ಬ್ರಿಟಿಷ್ ಕಾಂಗ್ರೆಸ್ ಸಮಿತಿ ಮತ್ತು ಇಂಡಿಯಾ ಪತ್ರಿಕೆ ಇಲ್ಲಿಯ ಉದಾರವಾದಿಗಳ ಇಂಗ್ಲಿಷ್ ಸ್ನೇಹಿತರ ಅಧೀನಕ್ಕೇ ಒಳಪಟ್ಟಿ ಇದ್ದುವು. ಕಾಂಗ್ರೆಸ್ ಸಮಿತಿ ಮತ್ತು ಪತ್ರಿಕೆ ಭಾರತ ರಾಷ್ಟ್ರೀಯ

ಕಾಂಗ್ರೆಸಿನ ಧೋರಣೆಗೆ ವಿರೋಧವಾಗುವ ರೀತಿಯಲ್ಲಿ ವರ್ತಿಸುತ್ತಿದ್ದುವು. ತಿಲಕರು ಇದನ್ನು ಸರಿಗೊಳಿಸಬಯಸಿದರು. ಆದರೆ ಆ ಬಗ್ಗೆ ಅವರಿಗೆ ರಾಷ್ಟ್ರೀಯ ಕಾಂಗ್ರೆಸಿನಿಂದ ಅಧಿಕೃತ ಆದೇಶವಿರಲಿಲ್ಲ. ಮುಂದೆ ಕಾಂಗ್ರೆಸಿನ ದೆಹಲಿ ಅಧಿವೇಶನವು ಈ ಪ್ರಶ್ನೆಯನ್ನೆತ್ತಿಕೊಂಡ ಮೇಲೆ ತಿಲಕರಿಗೆ ಆದರಲ್ಲಿ ಕೈಹಾಕುವುದು ಸಾಧ್ಯವಾಯಿತು. ಒಂದು ವರ್ಷದ ಪರಿಶ್ರಮದ ಮೇಲೆ ಅವರು ಬ್ರಿಟಿಷ್ ಕಾಂಗ್ರೆಸ್ ಸಮಿತಿ ಮತ್ತು ಇಂಡಿಯಾ ಪತ್ರಿಕೆಗಳನ್ನು ವ್ಯವಸ್ಥೆಗೆ ತಂದರು.

ಇಂಗ್ಲಂಡಿನಲ್ಲಿಯೂ ತಿಲಕರಿಗೆ ವಿರೋಧಿಗಳು ಇದ್ದೇ ಇದ್ದರು. ತಿಲಕರ ಕೆಲಸಗಳಲ್ಲಿ ಅವರು ಯಾವಾಗಲೂ ಎಡರು ತೊಡರುಗಳನ್ನು ತಂದೊಡ್ಡುತ್ತಿದ್ದರು. ಆದರೆ ಅಪಾರ ಅನುಭವವಿದ್ದ ತಿಲಕರಿಗೆ ಬ್ರಿಟಿಷ್ ಜನರ ಮನವೊಲಿಸಿಕೊಳ್ಳುವುದು ಕಷ್ಟವಾಗಲಿಲ್ಲ. ಅವರ ಭಾಷಣಗಳನ್ನು ಕೇಳಿ ಜನ ತೃಪ್ತರಾಗುತ್ತಿದ್ದರು. ಮೊದಲು ವಿರೋಧ ಸೂಚಿಸಿದವರೂ ತಿಲಕರು ಭಾಷಣ ಮುಗಿಸಿದಾಗ ಸೈ ಎಂದು ತಲೆದೂಗುತ್ತಿದ್ದರು.

ಸರ್ ವೆಲೆಂಟೈನ್ ಚಿರೋಲರ ವಿರುದ್ಧ ತಿಲಕರು ಹೂಡಿದ ದಾವೆಯು 1919ನೇ ಜನವರಿ 29ರಂದು ವಿಚಾರಣೆಗೆ ತೆಗೆದುಕೊಳ್ಳಲ್ಪಟ್ಟಿತು ನ್ಯಾಯಾಧೀಶ ಡಾರ್ಲಿಂಗ್ ಎಂಬವರ ಮುಂದೆ ಹನ್ನೊಂದು ದಿನಗಳ ವರೆಗೆ ವಿಚಾರಣೆ ನಡೆಯಿತು. ತಿಲಕರು ಇಂಗ್ಲಂಡಿನ ಮೇಧಾವಿ ನ್ಯಾಯಶಾಸ್ತ್ರ ಪಂಡಿತರ ಸಲಹೆ ಕೇಳಿಯೇ ಈ ದಾವೆಯನ್ನು ತಂದಿದ್ದರು. ಬ್ರಿಟಿಷ್ ನ್ಯಾಯದೇವತೆಯ ಮೇಲೆಯೂ ಅವರಿಗೆ ಅನುಪಮ ವಿಶ್ವಾಸವಿತ್ತು. ಇಂಗ್ಲಿಷ್ ನ್ಯಾಯಸ್ಥಾನದಲ್ಲಿ ಸತ್ಯಕ್ಕೆ ಪೂರ್ಣ ಜಯವಾಗುವುದೆಂದು ಅವರು ನಂಬಿದ್ದರು. ಆದರೆ ಅವರ ಸ್ನೇಹಿತರನೇಕರು ಆ ಕುರಿತು ಮೊದಲೇ ಸಂಶಯ ವ್ಯಕ್ತಪಡಿಸದೆ ಇರಲಿಲ್ಲ. ಬ್ರಿಟಿಷ್ ಸಾಮ್ರಾಜ್ಯದ ಚೇಲನೊಬ್ಬನ ವಿರುದ್ಧ ಇಂಗ್ಲಂಡಿನಲ್ಲಿ ದಾವೆ ಹೂಡಿ ಗೆದ್ದು ಬರುವುದಿದೆಯೆ? ಎಂದು ಅವರ ವಿರೋಧಿಗಳು ನಕ್ಕು ನುಡಿದಿದ್ದರು. ಜ್ಯುರಿಯ ಅಭಿಪ್ರಾಯ ಹೊರ ಬಿದ್ದಾಗ, ಈ ಮಾತೇ ಸತ್ಯವಾಯಿತು. ಜ್ಯುರಿ ಚಿರೋಲರ ಪರವಾಗಿ ಅಭಿಪ್ರಾಯ ಕೊಟ್ಟಿದ್ದರು. ನ್ಯಾಯಾಧೀಶರು ಜ್ಯುರಿಯ ಅಭಿಪ್ರಾಯವನ್ನೊಪ್ಪಿಕೊಂಡು ಅದರಂತೆಯೇ ತೀರ್ಪು ಬರೆದರು. ತಿಲಕರು ಚಿರೋಲರಿಗೆ ದಾವೆಯ ಖರ್ಚನ್ನೂ ಕೊಡಬೇಕೆಂದಾಯಿತು.

ಈ ರೀತಿಯ ತೀರ್ಪು ಬರಬಹುದೆಂದು ತಿಲಕರು ಕನಸಿನಲ್ಲಿಯೂ ನೆನಸಿರಲಿಲ್ಲ. ತೀರ್ಪು ಹೊರಬಿದ್ದಾಗ ಅವರಿಗಾದಷ್ಟು ಅಚ್ಚರಿ ಇಂಗ್ಲಂಡಿನಲ್ಲಿದ್ದ ಯಾವ ಭಾರತೀಯನಿಗೂ ಆಗಲಿಲ್ಲ. ತಿಲಕರು ತಮ್ಮ ಚಾರಿತ್ರ್ಯದ ನಿಷ್ಕಲಂಕತೆಯನ್ನು ಸ್ಥಾಪಿಸಹೊರಟು ಅಲ್ಲಿಯೂ ಕೆಟ್ಟ ಮಾತುಗಳನ್ನು ಹೇಳಿಸಿಕೊಂಡರು ಭಾರತದ ಅತ್ಯಂತ ಶ್ರೇಷ್ಠ ವ್ಯಕ್ತಿಯನ್ನು ಬ್ರಿಟಿಷ್ ಸಾಮ್ರಾಜ್ಯದ ಅತ್ಯುನ್ನತ ನ್ಯಾಯಾಲಯವು ಕಾಸಿಗಿಂತಲೂ ಕಡಿಮೆಯಾಗಿ ಗಣಿಸಿತು. ದಂಗೆಖೋರ, ಕೊಲೆಗಡುಕ ಎಂದು ಚಿರೋಲರು ತಿಲಕರ ಮೇಲೆ ಹೊರಿಸಿದ ದೋಷಾರೋಪಣೆಗಳೇ ನ್ಯಾಯಾಲಯಕ್ಕೆ ಸತ್ಯವಾಗಿ ಕಂಡುವು. ಹೀಗಿರುವಾಗ, ಜನ ಬ್ರಿಟಿಷ್ ನ್ಯಾಯದೇವತೆ ಕೂಡ ಚಪಲಚಿತ್ತಳು ಎಂದು ತಿಳಿದುಕೊಳ್ಳಲು ಪ್ರಾರಂಭಿಸಿದರೆ ತಪ್ಪೇನು?

ಚಿರೋಲರ ಮೇಲಿನ ದಾವೆಯಿಂದ ತಿಲಕರು ಸುಮಾರು ಮೂರು ಲಕ್ಷ ರುಪಾಯಿಗಳಷ್ಟನ್ನು ಕಳೆದುಕೊಂಡರು. ಜೀವನದ ಇಳಿಹೊತ್ತಿನಲ್ಲಿ ತಮ್ಮ ಆಸ್ತಿಗಳನ್ನೂ ಅವರು ಅಡವು ಹಾಕಬೇಕಾಯಿತು. ಅವರ ಸ್ನೇಹಿತರ ಮತ್ತು ಅನುಯಾಯಿಗಳ ನೆರವಿನಿಂದ ಈ ನಷ್ಟವನ್ನು ತುಂಬಿಕೊಳ್ಳುವುದೇನೂ ಅವರಿಗೆ ಕಷ್ಟವಾಗಲಿಲ್ಲ. ಆದರೆ ಬ್ರಿಟಿಷ್ ನ್ಯಾಯಸ್ಥಾನದಲ್ಲಿ ಭಾರತೀಯರಿಗಿದ್ದ ವಿಶ್ವಾಸ ಮಾತ್ರ ಆಗ ಅಳಿದು ಹೋಗಿತ್ತು. ಈ ನಷ್ಟವನ್ನು ಬ್ರಿಟನು ಹೇಗೆ ತುಂಬಿಕೊಂಡೀತು!

## ೧೩

# ಕೊನೆಯ ದಿನಗಳು

ಸಾವಿರದ ಒಂಭೈನೂರ ಹತ್ತೊಂಭತ್ತನೇ ನವಂಬರದಲ್ಲಿ ತಿಲಕರು ಇಂಗ್ಲಂಡಿನಿಂದ ಹಿಂದಿರುಗಿದರು. ಅವರು ಇಂಗ್ಲಂಡಿನಲ್ಲಿದ್ದ ವೇಳೆಯಲ್ಲಿ ದೇಶದಲ್ಲಿ ಹಲವಾರು ಘಟನೆ-ದುರ್ಘಟನೆಗಳು ನಡೆದಿದ್ದುವು. ಜನತಾ

ಹೋರಾಟಗಳನ್ನು ಹತ್ತಿಕ್ಕಲು ಸರಕಾರಕ್ಕೆ ನಿರಂಕುಶಾಧಿಕಾರಗಳನ್ನು ಕೊಡುವ ರೌಲಟ್ ಕಾಯಿದೆ ಜಾರಿಯಲ್ಲಿ ಬಂದಿತ್ತು. ಈ ಕಾಯಿದೆಯ ವಿರುದ್ಧ ಗಾಂಧಿಜಿ ಅಹಿಂಸಾತ್ಮಕ ಸಮರ ಸಾರಿದ್ದರು. ಚಳವಳವನ್ನು ಮುರಿಯಲು ಸರಕಾರ ಉಕ್ಕಿನ ಕೈಯನ್ನುಪಯೋಗಿಸಿತ್ತು. ಡೆಲ್ಲಿ, ಪಂಜಾಬ ಮೊದಲಾದ ಹಲವೆಡೆಗಳಲ್ಲಿ ಪೊಲೀಸರ ಲಾಥಿ, ಗುಂಡುಗಳಿಗೆ ಅನೇಕರು ಬಲಿಯಾಗಿದ್ದರು. ನೌಕರಶಾಹಿಯ ಮರ್ದನ ನೀತಿಗೆ ಕಲಶ ವೆಂಬಂತೆ ಜಲಿಯನ್‌ವಾಲಾಬಾಗಿನ ಹತ್ಯಾಕಾಂಡದಲ್ಲಿ ಜನರಲ್ ಡಯರನ ಸೈನಿಕರ ಗೋಲಿಗಳಿಗೆ ನೂರಾರು ಮಂದಿ ದೇಶಪ್ರೇಮಿಗಳು ಆಹುತಿಯಾಗಿದ್ದರು. ಸರಕಾರದ ಹಿಂಸಾತ್ಮಕ ಧೋರಣೆ ಜನತೆಯಲ್ಲಿಯೂ ಪ್ರತಿಹಿಂಸೆಯನ್ನು ಹುಟ್ಟಿಸಿತ್ತು. ದೇಶದ ಹತ್ತಾರು ಭಾಗಗಳಲ್ಲಿ ರೊಚ್ಚಿಗೆದ್ದ ಜನ ಕಾನೂನು-ಕಾಯಿದೆಗಳನ್ನು ತಮ್ಮ ಕೈಗೇ ತೆಗೆದುಕೊಂಡಿದ್ದರು. ಗಾಂಧಿಜಿ ತಮ್ಮ 'ಹಿಮಾಲಯದಂತಹ ತಪ್ಪ'ನ್ನು ಕಂಡುಕೊಂಡು ಸತ್ಯಾಗ್ರಹವನ್ನು ಹಿಂತೆಗೆದಿದ್ದರು.

ಈ ವರ್ಷದ ಕಾಂಗ್ರೆಸ್ ಅಧಿವೇಶನ ಅಮೃತಸರದಲ್ಲಿ ಜರಗುವುದಿತ್ತು. ಆಗ ದೇಶದ ಮುಂದಿದ್ದ ಮುಖ್ಯ ಪ್ರಶ್ನೆಯೆಂದರೆ, ಗವರ್ನಮೆಂಟ್ ಆಫ್ ಇಂಡಿಯಾ ಕಾನೂನಿನಲ್ಲಿ ಸೂಚಿತವಾದ ಸುಧಾರಣೆಗಳನ್ನು ಸ್ವೀಕರಿಸಬೇಕೋ ಬೇಡವೋ, ಎಂಬುದು. ಕಾಂಗ್ರೆಸ್ ಅಧಿವೇಶನದಲ್ಲಿಯೂ ಇದುವೇ ಚರ್ಚೆಯ ಮುಖ್ಯ ವಿಷಯವಾಗುವುದೆಂಬುದರಲ್ಲಿ ಸಂಶಯವಿರಲಿಲ್ಲ. ಈ ಕುರಿತು ತಿಲಕರ ಅಭಿಪ್ರಾಯವಂತೂ ಸ್ಪಷ್ಟವಾಗಿದ್ದಿತು. "ನಾವು ಸೂಚಿಸಿದ ಸುಧಾರಣೆಗಳು ನಿಮ್ಮ ನಿರೀಕ್ಷೆಗೆ ಸರಿಯಾಗದಿದ್ದಲ್ಲಿ ಏನು ಮಾಡುವಿರಿ?" ಎಂದು ಹಿಂದೆ ರಾಜ್ಯಕಾರ್ಯದರ್ಶಿ ಮೊಂಟೆಗ್ಯೂ ತಿಲಕರನ್ನು ಕೇಳಿದ್ದಾಗ ಅವರು, "ಕೊಟ್ಟುದನ್ನು ಸ್ವೀಕರಿಸಿ ಇನ್ನೂ ಹೆಚ್ಚಿನವುಗಳಿಗಾಗಿ ಹೋರಾಡುವೆ" ಎಂದಿದ್ದರು. ಈಗಲೂ ಅವರ ಧೋರಣೆ ಅದುವೇ ಆಗಿದ್ದಿತು. ಗವರ್ನಮೆಂಟ್ ಆಫ್ ಇಂಡಿಯಾ ಕಾನೂನಿನಲ್ಲಿ ಕೊಡಮಾಡಿದ ಸುಧಾರಣೆಗಳನ್ನು ಸ್ವೀಕರಿಸಿ, ಅವುಗಳನ್ನು ಜಾರಿಗೆ ತರುವುದರಲ್ಲಿ ಸರಕಾರದೊಡನೆ ಸಹಕರಿಸಬೇಕು. ಆದರೆ ಅಷ್ಟರಲ್ಲೇ ಕೆಲಸ ಮುಗಿಯಲಿಲ್ಲ. ಸರಕಾರದೊಡನೆ ಸಹಕರಿಸುವುದರೊಡನೆಯೇ, ಪೂರ್ಣ ಜವಾಬ್ದಾರಿ ಸರಕಾರವನ್ನು ಪಡೆಯುವುದಕ್ಕಾಗಿ ಹೋರಾಟವನ್ನು ಮುಂದುವರಿಸಬೇಕು. ಇದು ಲೋಕಮಾನ್ಯರ ಅಭಿಪ್ರಾಯ.

ಅಮೃತಸರ ಅಧಿವೇಶನದಲ್ಲಿ ಸುಧಾರಣೆಯ ಬಗ್ಗೆ ಮೂರು ಅಭಿಪ್ರಾಯಗಳು ಕಂಡುಬಂದುವು. ಗವರ್ನಮೆಂಟ್ ಆಫ್ ಇಂಡಿಯಾ ಕಾನೂನನ್ನು ಇದ್ದಕ್ಕಿದ್ದಂತೆಯೇ ಕೃತಜ್ಞತೆಗಳೊಡನೆ ಸ್ವೀಕರಿಸಬೇಕೆನ್ನುವ ಶ್ರೀಮತಿ ಬಿಸೆಂಟರ ಅಭಿಪ್ರಾಯಕ್ಕೆ ಯಾವ ಬೆಂಬಲವೂ ಇರಲಿಲ್ಲ. ದೇಶಬಂಧು ಚಿತ್ತರಂಜನ ದಾಸರು ಸುಧಾರಣೆಗಳನ್ನು ತಿರಸ್ಕರಿಸಿ, ಪೂರ್ಣ ಜವಾಬ್ದಾರಿ ಸರಕಾರಕ್ಕಾಗಿ ಹೋರಾಡಬೇಕೆನ್ನುವವರಾಗಿದ್ದರು. ಮೂರನೆಯದು ತಿಲಕರ ಅಭಿಪ್ರಾಯ. ಈ ಕುರಿತು ಹಲವು ತಾಸುಗಳ ವರೆಗೆ ಅಧಿವೇಶನದಲ್ಲಿ ಚರ್ಚೆ ನಡೆದು ಕೊನೆಗೆ ಗಾಂಧಿಜಿಯವರ ಪ್ರಭಾವದಿಂದಾಗಿ ಸರ್ವ ಸಮ್ಮತವಾದ ಒಂದು ಗೊತ್ತುವಳಿಯನ್ನು ಸಿದ್ಧಪಡಿಸುವುದು ಸಾಧ್ಯವಾಯಿತು. ಆದಷ್ಟು ಬೇಗನೆ ಪೂರ್ಣ ಜವಾಬ್ದಾರಿ ಸರಕಾರ ಸ್ಥಾಪಿತವಾಗುವಂತೆ ಗವರ್ನಮೆಂಟ್ ಆಫ್ ಇಂಡಿಯಾ ಕಾನೂನನ್ನು ಕಾರ್ಯಗತ ಮಾಡಬೇಕೆಂಬುದು ಈ ಗೊತ್ತುವಳಿಯ ಆಶಯವಾಗಿದ್ದಿತು. ಗೊತ್ತುವಳಿಯನ್ನು ಸಮರ್ಥಿಸಿ ಮಾತನಾಡುತ್ತ ಲೋಕಮಾನ್ಯರು ಹೀಗೆಂದರು:

"ಈ ಕಾನೂನಿನಿಂದ ನಮಗೆ ತೃಪ್ತಿಯಾಗಿಲ್ಲ ಎಂದು ನಾವು ಇಲ್ಲಿ ಮಾತ್ರವಲ್ಲ, ಇಡೀ ಜಗತ್ತಿಗೇ ಸ್ಪಷ್ಟವಾಗಿ ಹೇಳಬಯಸುತ್ತೇವೆ. ನಾವು ನಮ್ಮ ಚಳವಳವನ್ನು ಇನ್ನೂ ಮುಂದುವರಿಸಲು ಇಚ್ಛಿಸುವೆವು. ಗವರ್ನಮೆಂಟ್ ಆಫ್ ಇಂಡಿಯಾ ಕಾನೂನನ್ನು ನಮ್ಮ ಪ್ರಯೋಜನಕ್ಕಾಗಿ ಉಪಯೋಗಿಸಿಕೊಂಡು, ಇನ್ನೂ ಹೆಚ್ಚಿನ ಸುಧಾರಣೆಗಳನ್ನು ಪಡೆಯುವುದಕ್ಕಾಗಿ ಹೋರಾಟವನ್ನು ಮುಂದುವರಿಸುವೆವು. ಜಗತ್ತು ಇದನ್ನು ತಿಳಿದಿರಬೇಕು. ಈ ನೈಜ ಪರಿಸ್ಥಿತಿಯನ್ನು ಮರೆಮಾಚಿ, ಯುರೋಪಿನ ನಾಗರಿಕ ಜನಾಂಗಗಳಿಗೆ ತಪ್ಪು ಕಲ್ಪನೆ ಮಾಡಿ ಕೊಡಬೇಡಿ. ಈ ವಿಷಯದಲ್ಲಿ ಜಾಗರೂಕತೆ ವಹಿಸಿಕೊಳ್ಳಿ. ಈಗ ದೊರೆತ ಈ ಅಲ್ಪ ಸುಧಾರಣೆಗಳಿಂದಲೇ ತೃಪ್ತಿ, ಸಮಾಧಾನಪಟ್ಟುಕೊಂಡು ಅವುಗಳನ್ನು ಸಂತೋಷ, ಕೃತಜ್ಞತೆಗಳೊಡನೆ ಸ್ವೀಕರಿಸಿ ಸುಮ್ಮನೆ ಕುಳ್ಳಿರಬೇಡಿ."

ಇಷ್ಟರಲ್ಲಿ ದೇಶದ ರಾಜಕೀಯ ಸ್ಥಿತಿಯಲ್ಲಿ ಕೆಲವು ಬದಲಾವಣೆಗಳು ಕಂಡುಬಂದುವು. ಮುಖ್ಯವಾಗಿ, ಮೊದಲನೆಯ ಮಹಾಯುದ್ಧದ ಅನಂತರ ಬ್ರಿಟಿಷರು ತುರ್ಕಿಸ್ತಾನದ ಮೇಲೆ ಹೇರಿದ ಅವಮಾನಕಾರಕ

ಶಾಂತಿ ಒಪ್ಪಂದದಿಂದ ಭಾರತೀಯ ಮುಸ್ಲಿಮರು ರೊಚ್ಚಿಗೆದ್ದಿದ್ದರು. ಜಲಿಯನ್‌ವಾಲಾಬಾಗಿನ ಹತ್ಯಾಕಾಂಡದ ವಿಚಾರಣೆ ನಡೆಸಲು ನೇಮಿಸಿದ ಹಂಟರ್ ಸಮಿತಿಯ ವರದಿಯೂ ಭಾರತೀಯರಲ್ಲಿ ನಿರಾಶೆಯನ್ನು ಹರಡಿತ್ತು. ಗವರ್ನಮೆಂಟ್ ಆಫ್ ಇಂಡಿಯಾ ಕಾನೂನನ್ನು ಸರಿಯಾಗಿ ಕಾರ್ಯದಲ್ಲಿ ತರಲು ಸರಕಾರವು ಪ್ರಾಮಾಣಿಕವಾಗಿ ಪ್ರಯತ್ನಿಸದುದರಿಂದಲೂ ದೇಶದ ಜನ ಅಸಮಾಧಾನಗೊಂಡಿದ್ದರು. ಇವೆಲ್ಲವುಗಳ ವಿರುದ್ಧ ಗಾಂಧಿಜಿ ಅಸಹಕಾರ ಆಂದೋಲನವನ್ನು ಹೂಡಲು ನಿರ್ಧರಿಸಿದರು.

ಗಾಂಧಿಜಿ ಆಗಷ್ಟೇ ಭಾರತದ ರಾಜಕೀಯದಲ್ಲಿ ತಮ್ಮ ಪ್ರಭಾವವನ್ನು ಬೀರಲು ಪ್ರಾರಂಭಿಸಿದ್ದರು. ತಿಲಕರು ಈ ಉದಯೋನ್ಮುಖ ದೇಶವೀರನ ಬಗ್ಗೆ ತುಂಬಾ ಆಶಾಭಾವನವನ್ನು ತಳೆದಿದ್ದರು. ಕಳೆದ ಮೂವತ್ತು ವರ್ಷಗಳಿಂದಲೂ ಇಂಗ್ಲಿಷರೊಡನೆ ಅಸಹಕಾರ ಹೋರಾಟವನ್ನು ಹೂಡಿದ ಅವರು ಗಾಂಧಿಜಿಯವರ ಆಂದೋಲನಕ್ಕೆ ಬೆಂಬಲ ಕೊಡುವರೆಂಬುದರಲ್ಲಿ ಸಂದೇಹವೇ ಇರಲಿಲ್ಲ. ಆದರೆ ಗಾಂಧಿಜಿಗೂ ತಿಲಕರಿಗೂ ಒಂದು ವಿಷಯದಲ್ಲಿ ಭಿನ್ನಾಭಿಪ್ರಾಯವಿದ್ದಿತು. ಗಾಂಧಿಜಿಯವರ ಅಸಹಕಾರದಲ್ಲಿ ಕೌನ್ಸಿಲುಗಳ ಬಹಿಷ್ಕಾರವೂ ಸೇರಿತ್ತು. ತಿಲಕರು ಅದಕ್ಕೆ ವಿರೋಧವಿದ್ದರು. ಕೌನ್ಸಿಲಿನ ಒಳಗೆ ಹಾಗೂ ಹೊರಗೆ ಆಳರಸರೊಡನೆ ಹೋರಾಟ ನಡೆಸಬೇಕೆಂಬುದು ತಿಲಕರ ಧೋರಣೆಯಾಗಿದ್ದಿತು. ತಮ್ಮ ಧೋರಣೆಯನ್ನು ಮುಂದಟ್ಟುಗೊಳಿಸಿ ಅದು ಸ್ವೀಕಾರವಾಗುವಂತೆ ಮಾಡಲು ಅವರು ಕಲ್ಕತ್ತಾದಲ್ಲಿ ಜರಗಲಿದ್ದ ಕಾಂಗ್ರೆಸಿನ ವಿಶೇಷ ಅಧಿವೇಶನವನ್ನು ಎದುರು ನೋಡುತ್ತಿದ್ದರು. ಅವರು ಜೀವಂತ ಉಳಿದಿದ್ದರೆ ಗಾಂಧಿಜಿಯವರ ಹಾಗೂ ಅವರ ಅನುಯಾಯಿಗಳ ಮೇಲೆ ಪ್ರಭಾವ ಬೀರಲು ಸಮರ್ಥರಾಗುತ್ತಿದ್ದರೋ ಏನೋ! ಆದರೆ ಅಷ್ಟರಲ್ಲೇ ವಿಧಿ ಅವರನ್ನು ಕರೆದೊಯ್ದಿತು.

ತಿಲಕರು ಮೊದಲೇ ಮಧುಮೇಹದಿಂದ ನರಳುತ್ತಿದ್ದರು. ಇದು ಹಲವು ವರ್ಷಗಳ ತುರಂಗವಾಸದಿಂದ ದೊರೆತ ಪ್ರಸಾದ. ಆ ಮೇಲೆ ಒಂದು ಸಂಜೆ ಮುಂಬಯಿಯಲ್ಲಿ ಮೋಟಾರುಕಾರಿನಲ್ಲಿ ತಿರುಗಾಡಹೋಗಿದ್ದಾಗ ಅಲ್ಲಿಯೇ ಅವರಿಗೆ ಚಳಿ ಕಾಣಿಸಿಕೊಂಡಿತು. ಇದೇ ಚಳಿಜ್ವರ ಅನಂತರ ನಿಮೋನಿಯವಾಗಿ ಪರಿವರ್ತಿಸಿತು. ಆದರೂ ಅದು ಅವರ ಜೀವಕ್ಕೆ ಅಪಾಯ ತರಬಹುದೆಂದು ಯಾರೂ ಭಾವಿಸಿರಲಿಲ್ಲ. ಸ್ವತಃ

ತಿಲಕರು ತಾವು ಈ ಕುತ್ತದಿಂದ ಪಾರಾಗುವೆವೆಂದು ಆಶೆಯನ್ನಿಟ್ಟು ಕೊಂಡಿದ್ದರು. ತಮ್ಮನ್ನು ನೋಡಲೆಂದು ಬಂದ ಮಗ ಮತ್ತು ಮಗಳಂದಿರನ್ನು ಈ ಸಣ್ಣ ಕಾರಣಕ್ಕಾಗಿ ಓಡಿ ಬಂದುದೇಕೆಂದು ಬೈದಿದ್ದರು. "ಇನ್ನು ಐದು ವರ್ಷಗಳ ನರೆಗೆ ನಾನು ಸಾಯುವುದಿಲ್ಲ. ಇದು ಖಂಡಿತ" ಎಂದು ತಮ್ಮ ಸ್ನೇಹಿತರಲ್ಲಿ ಹೇಳಿದ್ದರು. ಆದರೆ ಮೃತ್ಯುವಿಗೆ ಕರುಣೆಯೆಂಬುದಿಲ್ಲ. ಒಳ್ಳೆಯವರು ಕೆಟ್ಟವರೆಂಬುದೂ ಇಲ್ಲ. ಬೇಕು ಬೇಡಗಳನ್ನೂ ಅದು ತಿಳಿಯದು. ಅಗಸ್ಟ ತಾರೀಕು 1ರಂದು ಅದು ತಿಲಕರನ್ನು ತನ್ನ ಅತಿಥಿಯಾಗಿ ಕರೆದುಕೊಂಡಿತು. ದೇಶದ ಸ್ವಾತಂತ್ರ್ಯ ಜ್ಯೋತಿಯೊಂದು ಆರಿತು. ಜನರಲ್ಲಿ ಸ್ವಾತಂತ್ರ್ಯದ ನವೋದಯವನ್ನುಂಟು ಮಾಡಿದ ಅತ್ಯುಚ್ಚ ದೇಶವೀರನು ಇನ್ನಿಲ್ಲವಾದನು.

ತಮ್ಮ ಕೊನೆಯ ದಿನಗಳಲ್ಲೂ ತಿಲಕರು ದೇಶದ ಕುರಿತೇ ಚಿಂತನೆ ಮಾಡುತ್ತಿದ್ದರು. ಅರ್ಧ ಚೇತನಾವಸ್ಥೆಯಲ್ಲಿದ್ದಾಗಲೂ ಕಾಂಗ್ರೆಸಿನ ಕಲ್ಕತ್ತಾ ಅಧಿವೇಶನದ ಕುರಿತು ಆಗಾಗ ಗೊಣಗುತ್ತಿದ್ದರು. ಸಾಯುವ ಮೊದಲು ಅವರು ಆಡಿದರೆನ್ನುವ ಕೊನೆಯ ಮಾತೆಂದರೆ, "ಸ್ವರಾಜ್ಯ ದೊರೆಯದೆ ಭರತಖಂಡ ಅಭಿವೃದ್ಧಿ ಹೊಂದದು. ನನ್ಮ ಅಸ್ತಿತ್ವಕ್ಕೇ ಅದು ಅವಶ್ಯ."

ಲೋಕಮಾನ್ಯರ ಅಂತ್ಯಕ್ರಿಯೆ ಎಲ್ಲಿ ನಡೆಯಬೇಕೆಂಬ ಬಗ್ಗೆ ಈಗ ಒಂದು ವಿವಾದವೆದ್ದಿತು. ಪೂನದ ಜನ ಆ ಗೌರವ ತಮಗೆ ಸಿಗಬೇಕೆಂದರು. ಮುಂಬಯಿಗೆ ಸಿಗಬೇಕೆಂದು ಮುಂಬಯಿಯ ಜನ ವಾದಿಸಿದರು. ಕೊನೆಗೆ ಮುಂಬಯಿಯ ಚೌಪಾಟಿಯ ಮಳಲಲ್ಲಿ ಗಂಧದ ಕಟ್ಟಿಗೆಯಲ್ಲಿ ಅವರ ಪಾರ್ಥಿವ ಶರೀರವನ್ನು ಸುಡಲಾಯಿತು. ಅಂತ್ಯಕ್ರಿಯೆಯಲ್ಲಿ ಗಾಂಧಿಜಿ, ಶೌಕತ ಆಲಿ, ಸೈಫುದ್ದೀನ ಕಿಚ್ಲು ಮೊದಲಾದ ಮುಖಂಡರು ಭಾಗವಹಿಸಿದ್ದರು. ಶ್ಮಶಾನ ಯಾತ್ರೆಯ ಮೆರವಣಿಗೆ ಒಂದುವರೆ ಮೈಲುಗಳಷ್ಟು ಉದ್ದವಿದ್ದು, ಎರಡು ಲಕ್ಷಗಳಷ್ಟು ಜನರು ಅಲ್ಲಿದ್ದರು. ಮಾರ್ಗದ ಇಕ್ಕಡೆಗಳಲ್ಲಿ ಜನ ನಿಂತಿದ್ದು, ಹೂಮಳೆಗರೆದು ತಮ್ಮ ನಾಯಕರಿಗೆ ಅಂತಿಮ ಗೌರವ ಸಲ್ಲಿಸುತ್ತಿದ್ದರು.

ತಿಲಕರ ಶ್ಮಶಾನ ಯಾತ್ರೆಯನ್ನು ಆಗಿನವರೊಬ್ಬರು ಹೀಗೆ ವರ್ಣಿಸಿದ್ದಾರೆ:

"ರಾತ್ರಿ ಒಂದು ಗಂಟೆಯ ಸಮಯ. ಎಲ್ಲ ಕಡೆಗಳಲ್ಲಿಯೂ ಶಾಂತಿ ನಿಶ್ಶಬ್ದತೆಗಳು ಆವರಿಸಿದ್ದುವು. ಅಲ್ಪ ಸ್ವಲ್ಪ ಮಳೆ ಸುರಿಯುತ್ತಿತ್ತು. ಜನರೆಲ್ಲ ಮರುದಿನ ತಾವು ಎದುರಿಸಲಿರುವ ವಿಪತ್ತಿನ ಗೊಡವೆಯಿಲ್ಲದೆ ನಿದ್ದೆಹೋಗಿದ್ದರು. ಆದರೆ ಈ ಜಗತ್ತನ್ನಾಳುವ ಗೂಢ ಶಕ್ತಿ ಮಾತ್ರ ಎಚ್ಚರವಾಗಿಯೇ ಇತ್ತು. ಆ ಶಕ್ತಿ ಯಾರಿಗೂ ಅರಿವಿಲ್ಲದೆಯೇ ಜನತೆಯ ಅತ್ಯಂತ ಪ್ರೀತಿ, ಗೌರವ, ಕೃತಜ್ಞತೆಗಳಿಗೆ ಪಾತ್ರನಾದ ಮಹಾವ್ಯಕ್ತಿಯನ್ನು ಕೊಂಡೊಯ್ದಿತು........ ಭಾರತದ ಆಶೋತ್ತರಗಳ ನಿಷ್ಠಾವಂತ ಪಹರೆಗಾರ ಬೆಳಗಾಗುವಾಗ ಜನತೆಯ ನಡುವಿನಿಂದ ದೂರವಾಗಿದ್ದನು.... ಆತನ ನಿಧನದ ಸುದ್ದಿ ಜನರಿಗೊಂದು ಆಘಾತವಾಗಿದ್ದಿತು. ಸಿಡಿಲಿನಂತೆ ಬಡಿದ ಆ ಸುದ್ದಿಯಿಂದ ಎಲ್ಲರೂ ಮೂಕರಾಗಿ ಹೋಗಿದ್ದರು. ಏನು ಮಾಡುವುದೆಂದು ಅರಿಯದೆ ಒಬ್ಬರನ್ನೊಬ್ಬರು ಪಿಳಿ ಪಿಳಿ ಕಣ್ಣುಗಳಿಂದ ನೋಡುತ್ತಿದ್ದರು.

"ಮುಂಬಯಿಯ ಇತಿಹಾಸದಲ್ಲಿ ಈ ರೀತಿಯ ದುಃಖ ಪ್ರದರ್ಶನ ಹಿಂದೆಂದೂ ನಡೆದಿರಲಿಲ್ಲ. ಬೆಳಗ್ಗೆ 7 ಗಂಟೆಯಿಂದಲೇ 'ಸರ್ದಾರ ಗೃಹ'ದ ಮುಂದೆ ಜನರು ಕೂಡಲು ಪ್ರಾರಂಭಿಸಿದ್ದರು. ಮಜೂರ ಗಿರಣಿಯನ್ನು, ಮಾರವಾಡಿ ಖಾತೆ ಪುಸ್ತಕಗಳನ್ನು, ಬನಿಯ ಹಣದ ಚೀಲವನ್ನು ಬಿಟ್ಟು ಅಲ್ಲಿ ಬಂದಿದ್ದ. ಸ್ತ್ರೀ ಪುರುಷರೆಂಬ ಭೇದವಿಲ್ಲದೆ, ಹಿಂದು, ಮುಸಲ್ಮಾನ, ಪಾರ್ಸಿ, ಕ್ರಿಶ್ಚಿಯನರೆಂಬ ವ್ಯತ್ಯಾಸವಿಲ್ಲದೆ ಎಲ್ಲರೂ ದೇಶದ ಪೂಜಾ ಮಂದಿರದಲ್ಲಿ ಸರ್ವಸ್ವವನ್ನೂ ತ್ಯಾಗಮಾಡಿದ, ದೇಶದ ಆಶೋತ್ತರಗಳ ರಕ್ಷಣೆಯಲ್ಲಿ ಅಸದೃಷ ಸಂಕಷ್ಟಗಳನ್ನನುಭವಿಸಿದ ತಮ್ಮ ಪ್ರಿಯ ನೇತಾರನಿಗೆ ಅಂತಿಮ ಗೌರವ ಸಲ್ಲಿಸಲು ಮನೆಬಿಟ್ಟು ಬಂದಿದ್ದರು. ಜೀವಂತರಿದ್ದಾಗಲೇ ತಿಲಕರು ಜನತೆಯ ಅಪೂರ್ವ ಗೌರವಗಳಿಗೆ ಪಾತ್ರರಾದವರು. ಆದರೆ 1920ರ ಅಗಸ್ಟ 1ರಂದು ಮುಂಬಯಿಯ ರಸ್ತೆಗಳಲ್ಲಿ ವಿಜಯಯಾತ್ರೆಯನ್ನು ಕೈಗೊಂಡ ತಿಲಕರಿಗೆ ದೊರೆತ ಗೌರವ ಅವರು ಜೀವಂತರಿದ್ದಾಗ ದೊರೆತುದಕ್ಕಿಂತಲೂ ಉನ್ನತವಾದುದು."

———0⊂⊃0•0⊂⊃0———